

Chandamama, February '52

Photo by Pranlal K. Patel

ಒತ್ರರ



## ಈ ಸಂಚಿಕೆಯಲ್ಲಿ



ಇವಲ್ಲದೆ ಚುಟಕ, ಒಗಟುಗಳು, ಬುದ್ಧಿವಂತಿಕೆ ಇತ್ಯಾದಿಗಳನೇಕ.




ಡಿಸ್ಟ್ರಿಬ್ಯೂಟರುಗಳು

| | | | |
|---|---|---|---|
| ಆಂಧ್ರ : | ಗೋಕುಲ್ ಕೃಷ್ಣಾ | .... | ವಿಜಯವಾಡ. |
| ನೈಜಾಮ್: | ಪ್ರೀಮಿಯರ್ | .... | ಸಿಕಿಂದ್ರಾಬಾದ್. |
| ಸೀಡೆಡ್ : | ಶಾಂತಿ | .... | ಗುಂಟಕಲ್. |
| ಮೈಸೂರು: | ಜಯಂತ್ | .... | ಬೆಂಗಳೂರು |

# ಪರ್ಲ್ ಕಾಢಾ

**ಶರೀರದಲ್ಲಿಯ ಅಸಹ್ಯ ಉಷ್ಣತೆಯನ್ನು ತೆಗೆದುಹಾಕುವದು.**



ಪರ್ಲ್ ಕಾಢಾ ಶರೀರದ ಒಳಗಿನ ಮತ್ತು ಹೊರಗಿನ ಉರುಪನ್ನು ತೆಗೆದು ಹಾಕಿ ಶಾಂತಿಯನ್ನು ತಂಪಾಗಿಡುವದು. ಅಪಚನ, ಅಜೀರ್ಣವನ್ನು ಸರಿಪಡಿಸುವದು, ಶಾರೀರಿಕ ಮತ್ತು ಮಾನಸಿಕ ಶಕ್ತಿಯನ್ನು ಬೆಳೆಸುವದು. ಧಾತುಸ್ರಾವದಲ್ಲಿಯ ಉಷ್ಣತೆಯನ್ನು ಹೋಗಲಾಡಿಸಿ ಪುಷ್ಟಿಕರ ಮಾಡುವದು.

# ಅಬಲಾಮೃತ

**ಸ್ತ್ರೀಯರ ನಿಶಕ್ತಿ, ಯೌವನ, ಸೌಂದರ್ಯವನ್ನು ಸುಧಾರಿಸುತ್ತದೆ**

ಬಿಳಿದುಸ್ರಾವ, ಬಳುಪು ಮತ್ತು ಕೆಂಪುಸ್ರಾವ, ಮಕ್ಕಳ ಹೆರಿಗೆಯಿಂದಾಗಿ ಬರುವ ಜ್ವರ ಮತ್ತು ಇತರ ಎಲ್ಲಾ ರೋಗಗಳನ್ನೂ, ನಿಶ್ಶಕ್ತಿಯನ್ನೂ, ಗರ್ಭಾಶಯದ ಅತಿಸಾರವನ್ನೂ, ತಡೆಯಲಸಾಧ್ಯವಾದ ಬೆನ್ನುನೋವು, ಸೊಂಕನೋವು, ಕ್ರಮರಹಿತ ಮತ್ತು ಅಲ್ಪವೂ, ಧಾರಾಳವೂ ಆದ ಮುಟ್ಟು ದೋಷ ಇಂತಹ ಮುಟ್ಟು ದೋಷಗಳಿಂದ ಸ್ತ್ರೀಯರ ದೇಹಾರೋಗ್ಯವನ್ನೇ ಹಾಳುಮಾಡುತ್ತದೆ ಅಲ್ಲದೆ ಶಕ್ತಿಯನ್ನೂ ಸೌಂದರ್ಯವನ್ನೂ ಹೋಗಲಾಡಿಸಿ ಅಕಾಲದಲ್ಲೇ ಮುದುಕರನ್ನಾಗಿ ಮಾಡುವುದು. ಪರ್ಲ್ ಅಬಲಾಮೃತವು ಈ ಎಲ್ಲಾ ದೋಷಗಳನ್ನೂ ಸರಿ ಪಡಿಸುವುದು.




**ಪರ್ಲ್ ಎಂಡ್ ಕಂಪನಿ.**
ಬೊಂಬಾಯಿ. ೨೭.

## ಡೋಂಗರೇ ಬಾಲಾಮೃತ

ಇದು ಸೊರಗಿ ಕಡ್ಡಿಯಂತಾದ ಚಿಕ್ಕ ಮಕ್ಕಳಿಗೆ ಆರೋಗ್ಯವನ್ನೂ ಪುಷ್ಟಿಯನ್ನೂ ಬಲವನ್ನೂ ಕೊಡುತ್ತದೆ. ಇದರ ಸೇವನೆಯಿಂದ ಮಕ್ಕಳ ಹಲ್ಲುಗಳು ಕಷ್ಟವಿಲ್ಲದೆ ಹೊರಬೀಳಲು ಸಹಾಯವಾಗುತ್ತದೆ.

# ಚಂದಮಾಮ



ವಾರ್ಷಿಕ ಚಂದಾ
ರೂ. ೪ - ೮ - ೦

ಎರಡು ವರ್ಷ ಚಂದಾ
ರೂ. ೮ - ೦ - ೦



**CHANDAMAMA OFFICE**

2 & 3 Arcot Road,
Kodambakkam :: Madras-24

ಮತ್ತು ಎರಡು ಭಾಷೆಗಳಲ್ಲಿ ಚಂದಮಾಮ



# ಮಳಯಾಳ ಮಹಾರಾಷ್ಟ್ರ

ಭಾಷೆಗಳಲ್ಲಿ

# ಚಂದಮಾಮ

ಬೇಗನೇ ಬರಲಿದ್ದಾನೆ



ವಿವರಗಳಿಗೆ :

ಚಂದಮಾಮ ಪಬ್ಲಿಕೇಷನ್ಸ್,

ಕೋಡಂಬಾಕಂ :: ಮದರಾಸು - 24.

ಚಂದಮಾಮ
ಮಕ್ಕಳ ಕಥೆಯ ಮಾಸಪತ್ರಿಕೆ



ಸಂಪುಟ ೮ : ಸಂಚಿಕೆ ೨

ಫೆಬ್ರವರಿ ೧೯೫೨

## ಹುಟ್ಟು ಗುಣ

ಶ್ರೀರಾಮನ ಸೇವಕ ಹನುಮಂತನು
ಜಾತಿ ಸ್ವಭಾವವ ಬಿಡಲಿಲ್ಲ
ಗರುಡನು ಕೃಷ್ಣನ ವಾಹನನಾದರು
ಉರಗವ ತಿನುವುದ ಬಿಡಲಿಲ್ಲ

ಹುಲಿಮರಿಯನು ಮನೆಯಲಿ ಸಾಕಿದರೂ
ಕ್ರೂರ ಸ್ವಭಾವವ ಬಿಡದಣ್ಣ
ಹರಿಯುವ ಹಾವಿಗೆ ಹಾಲನುಣಿಸಿದರು
ಕಡಿದರೆ ವಿಷವದು ನಿಜವಣ್ಣ

ಕಹಿಬೇವಿಗೆ ಬೆಲ್ಲವ ಸೇರಿಸಿದರು
ಬೇವಿನ ಕಹಿಯದು ಹೋಗುವುದೆ?
ಅಜ್ಜನ ಮೀಸೆಗೆ ಬಣ್ಣವ ಬಳಿದರು
ಅಜ್ಜಿಗೆ ಯೌವನ ಬರಲಿಹುದೆ?

ಸೊಣಗನ ಬಾಲವ ನಳಿಗೆಯೊಳಿಟ್ಟರು
ಬಾಲವು ಬಾಗದೆ ಇದರಣ್ಣ
"ಹುಟ್ಟು ಗುಣವು ಸುಟ್ಟರ ಬಿಡದೆನ್ನುವ"
ಹಿರಿಯರ ಮಾತಿದು ನಿಜವಣ್ಣ.

ಬಿ. ರಾಮಚಂದ್ರ ಭಟ್ಟ.





# ಧನ್ಯಜೀವಿ

(‘ಗೋವುಕರುವನು ಬಿಟ್ಟು ಬಂದು’ ಎಂಬಂತೆ)

ಮರಳುಕಾಡೊಳು ಕಾಳುರಾತ್ರಿಯು
ನರ ಮನುಷ್ಯರ ಸುಳಿವನೀಯದೆ
ಹರಡಿಕೊಂಡಿರಲೊಂದು ಗುಡಾರದಿ
ಒರಗಿ ಮಲಗಿದ ಯೂಸುಫ

ಕೊರಳ ಕೇಳಿದನಾರ್ತ ನೋರ್ವನ
ತೊರೆದು ತಲ್ಪವ ಸಾರಿ ದ್ವಾರಕೆ
ಭರಿತ ಭಯದಿಂ ನಡುಗುವಾತನ
ಕರೆದು ಅಭಯವನಿತ್ತನು.

“ಧರಮು, ದಯೆಯು, ನಿನ್ನೊಳೈಕ್ಯವು
ಶರಣು, ಸಲಹೈ ಘನ ದಯಾಮಯ!
ಘೋರ ದಂಡನೆಗಾನು ಗುರಿಯು,
ತ್ವರದಿ ತಪ್ಪಿಸಿ ಬಂದೆನ.”

ಎಂದರುಹಲಾ ದೀನ ಯುವಕನು
ಒಂದು ಧರ್ಮವು ಆರ್ತ ರಕ್ಷಣೆ
ಯೆಂದು ನೆನೆಸಿ ದಯೆಯ ತೋರಿ
ಉಪಚರಿಸಿದ ಯೂಸುಫನ ತನ.

ಉದಯವಾಗಲು ಆತನತಿಥಿಯ
ಮುದದಲೆಬ್ಬಿಸಿ ಧನವನಿತ್ತು
ತನ್ನ ಮುದ್ದಿನ ಹಯವ ತೋರಿ
ಮುನ್ನ ಸಾಗಲು ತಿಳಿಸಿದ

'ಕಮಲ ಪ್ರಿಯ' ಮದರಾಸು,
(ತೆಲುಗಿನಾಧಾರ)

ದೀಪ, ದೀಪವ ಹಚ್ಚಿ ಬೆಳಗುವ
ರೀತಿಯಿಂದಲುದಾರ ಹೃದಯವು
ದೇವ ಭಾವನೆಯಿಂದಲನ್ಯರ
ಪ್ರೇಮ ದೀಪವನುರಿವುದು.



ಧನ್ಯ ಯೂಸುಫನತುಳ ದಯೆಯಿಂ
ದನ್ಯ ಮರ್ಮಿಯು ಮನವು ಚಲಿಸಿತು
ಮಂಡಿಯೂರಿ ತೊಯ್ದ ಕೆಂಗಳೊ
ಳಿಂತು ಬೆಸಸಿದನತಿಥಿಯಂ.

"ದೇವ, ಮಹಿಮನೆ, ಎಂತು ಸರಿಯಲಿ,
ತವಕುಮಾರನ ಕೊಂದ ಹಂತಕ,
ಕಾವ ಸಾಕ್ಷಿಯು, ನಾನೆ ಪಾತಕಿ!
ಇಬರಹಿಮನೆಂಬಭಾಗ್ಯನ."




"ಇತ್ತ ನಿಲುವುದು ಚಂದವಲ್ಲವು
ಮತ್ತೆ ಮೂರ್ಮಡಿ ಧನವನಿದುಕೊ
ಮತ್ತೆ ಎಂದಿಗೂ ಇತ್ತ ಬಾರದೆ
ಎತ್ತಲಾದರೂ ದೂರ ಪೋ"

ಎಂದ ಯೂಸುಫ ಶಾಂತಿಯಿಂದಲಿ
ಬಂಧು ದ್ವೇಷವ ನಂತಗೊಳಿಸಿ
ತನದಲುಪಕೃತಿಯೆಸಗಿ ಕಳುಹಿ
ಭುವಿಯೊಳಾದನು ಧನ್ಯನು.

# ಬೆಕ್ಕಿನ ಸೋಲು



ಇಲಿಯನು ಹಿಡಿಯಲು ಹೊಂಚನು ಹಾಕುತ ಬೆಕ್ಕು ಕೂತಿತ್ತು.
ಯಾರೂ ಇಲ್ಲದ ಅಡಿಗೆಯ ಮನೆಯಲಿ ಸದ್ದೇ ಅಡಗಿತ್ತು.

ತಿಂಡಿಯ ಹುಡುಕಲು ಕೊಬ್ಬಿದ ಇಲಿಮರಿ ಮೆಲ್ಲಗೆ ಹೊರಬಂತು,
ಕಡುಬನು ನೋಡುತ ನೆನೆಸಿತು ಮನದಲೆ 'ಕದಿಯುವೆ ನಾನೆಂತು?'

"ಆದುದು ಆಗಲಿ" ಎನ್ನುತ ಧೈರ್ಯದಿ ಕಡುಬಿಗೆ ಬಾಯಿಕ್ಕಿ,
ಓಡಲು ಹವಣಿಸೆ ಇಲಿಮರಿ ಚೀರಿತು ಬೆಕ್ಕಿಗೆ ಸೆರೆಸಿಕ್ಕಿ

ಹಾರಿದ ಬೆಕ್ಕಿನ ಕಾಲದೊ ಬಡಿಯಿತು ಹಾಲಿನ ಪಾತ್ರಕ್ಕೆ
ಉರುಳಿತು ಪಾತ್ರೆಯು, ಚೆಲ್ಲಿತು ಹಾಲು ನೆಲದಾ ಮೇಲಕ್ಕೆ

ಸದ್ದನು ಕೇಳಿ ಹೊರಗಡೆ ಕೂತಿಹ ಅಕ್ಕನು ಒಳಬಂದು,
ನೋಡಲು ಇಲ್ಲವು ಒಂದೇ ಒಂದು ನೊರೆ ಹಾಲಿನ ಬಿಂದು

"ಮಾಡುವೆ ಮದ್ದನು" ಎನ್ನುತ ಆಕೆಯು ಕಸಬರಿಕೆಯ ತಂದು
ಟಪ್ಪನೆ ಏಟನು ಬಿಗಿದಳು ಬೆಕ್ಕಿನ ಬೆನ್ನಿಗೆ ನಾಲ್ಕೈದು.

"ಮಿಯಾಂವ್" ಎನ್ನುತ ಬೆಕ್ಕದು ಉರುಳಲು ಇಲಿಮರಿ ತಪ್ಪಿಸಿತು
"ಬದುಕಿದೆ ಜೀವವೆ, ಉಳಿಸಿದೆ ದೇವನೆ" ಎಂದಿತು ಮನದಲ್ಲೆ.

ಕೈಯಲಿ ಸಿಕ್ಕಿದ ತುತ್ತದು ಬಾಯಿಗೆ ಸಿಕ್ಕದೆ ಹೋಯ್ತೆಂದು,
ಮರಮರ ಮರುಗಿತು, ಸಿಟ್ಟಿಲಿ ಬೆಂದಿತು ಬೆಕ್ಕದು ಹೊರಬಂದು.

ಹೊಸಮನಿ ಗೋವರ್ಧನ್, ಮೂಡಬಿದ್ರೆ.



# ಪ್ರತ್ಯುಪಕಾರ

ವಿಂಧ್ಯಾರಣ್ಯಕ್ಕೆ ಸಮೀಪದಲ್ಲಿ ಒಂದು ಹಳ್ಳಿಯಿತ್ತು. ಆ ಹಳ್ಳಿಯಲ್ಲಿ ಒಬ್ಬ ಹಾವಾಡಿಗನಿದ್ದನು. ಅವನೊಂದು ದಿನ ಹಳ್ಳಿಗೆ ಹೋಗಿ ಒಂದು ಹುತ್ತದ ಎದುರಾಗಿ ನಿಂತು ಪುಂಗಿ ಊದಲು, ಹಾಡು ಕೇಳಿ ಹುತ್ತದೊಳಗಿಂದ ನಾಗರಹಾವು ಹೊರಗೆ ಬಂತು. ಆ ಹಾವು ಹೆಡೆ ಬಿಚ್ಚಿ ಆಡುತ್ತಾ ಅವನ ಸಂಗೀತ ಕೇಳುತ್ತಾ ಮೈಮರೆತಿರುವುದನ್ನು ಕಂಡು, ಹಾವಾಡಿಗನು ಉಪಾಯವಾಗಿ ಅದನ್ನು ಹಿಡಿದು ತನ್ನ ಬುಟ್ಟಿಯಲ್ಲಿ ಹಾಕಿಕೊಂಡನು.

ಆ ಸರ್ಪ ತನಗೆ ಆದ ಮೋಸಕ್ಕೆ ಭಯಪಟ್ಟಿತು. ಆ ಆಪತ್ತಿನಿಂದ ತಪ್ಪಿಸಿಕೊಳ್ಳುವುದು ಹೇಗೆ ಎಂದು ಯೋಚಿಸುತ್ತಿರುವಾಗ ದಯಾಮಯನೆಂಬ ಸಾಮಂತರಾಜನೊಬ್ಬನು ಅಲ್ಲಿಗೆ ಬಂದು "ಅಯ್ಯಾ, ಆ ಬುಟ್ಟಿಯಲ್ಲೇನಿದೆ?" ಎಂದು ಹಾವಾಡಿಗನನ್ನು ಕೇಳಿದ.

"ಪ್ರಭೂ ಒಳ್ಳೇ ಜಾತಿ ನಾಗರಹಾವನ್ನು ಹಿಡಿದಿದ್ದೇನೆ. ನೋಡುವಿರೇನು?" ಎಂದು ಹೇಳುತ್ತಾ ಹಾವಾಡಿಗನು ಅದನ್ನು ಬಿಚ್ಚಿ ತೋರಿಸಿದ.

ಆ ಸಮಯ ನೋಡಿ ಆ ಸರ್ಪವು ಸಾಮಂತರಾಜನೊಂದಿಗೆ "ರಾಜನೇ, ಅಡವಿಯಲ್ಲಿ ನಾನು ಸ್ವೇಚ್ಛೆಯಾಗಿ ತಿರುಗಾಡದಂತೆ ಈ ಕಿರಾತನು ನನ್ನನ್ನು ಮೋಸಮಾಡಿ ಸೆರೆಹಿಡಿದುಕೊಂಡು ಹೋಗುತ್ತಿರುವನು. ನನ್ನನ್ನು ಇವನ ಕೈಯಿಂದ ಬಿಡಿಸಿ, ಸ್ವೇಚ್ಛೆಯನ್ನು ಕರುಣಿಸಿ" ಎಂದು ಮೊರೆಯಿಟ್ಟುಕೊಂಡಿತು.

ದಯಾಮಯನು ತುಂಬಾ ಕರುಣಾಳು. ಹಾವಾಡಿಗನೊಂದಿಗೆ "ಅಪ್ಪಾ, ಹಾವನ್ನು ಬಿಟ್ಟುಬಿಡು. ಅದರ ದಾರಿ ಅದು ಹೋಗುವುದು" ಎಂದು ಹೇಳಿದ.

ಆದರೆ ಹಾವಾಡಿಗನು "ಪ್ರಭುಗಳೇ, ಈ ಸರ್ಪವನ್ನು ಊರೂರಿಗೆ ತೆಗೆದುಕೊಂಡು ಹೋಗಿ, ಮನೆಮನೆಗೆ ತೋರಿಸಿ ಭಿಕ್ಷೆ ಬೇಡಿದ ಹೊರತು ನಾನು ನನ್ನ ಸಂಸಾರರಥವನ್ನು ಸಾಗಿಸುವಂತಿಲ್ಲ. ಇದನ್ನು ಬಿಟ್ಟುಬಿಡುವಂತೆ ಆಜ್ಞೆ ಮಾಡಿ ನನ್ನ ಹೊಟ್ಟೆಯ ಮೇಲೆ ಕಲ್ಲು ಹಾಕುವಿರೇನು?" ಎಂದ.

ಅದಕ್ಕೆ ದಯಾಮಯನು "ಕಾರಣವು ಅದಾದರೆ ಈ ಮುತ್ತಿನ ಹಾರವನ್ನು ತೆಗೆವ

'ಸುದರ್ಶನ' - ಮದರಾಸು.




ಕೊಂಡುಹೋಗಿ ಮಾರಿಕೋ, ಇದರಿಂದ ನಿನ್ನ ಬಡತನ ನೀಗುವುದು. ಹಾವನ್ನು ಮಾತ್ರ ಬಿಟ್ಟುಬಿಡು" ಎಂದು ಹೇಳಿ, ತನ್ನ ಕೊರಳಲ್ಲಿದ್ದ ಹಾರವನ್ನು ತೆಗೆದು ಅವನ ಕೈಗೆ ಕೊಟ್ಟನು.

ಹಾವಾಡಿಗನು ಸಂತೋಷ ಹೊಂದಿ, ಹಾವನ್ನು ಬಿಟ್ಟುಬಿಟ್ಟು ತನ್ನ ದಾರಿಹಿಡಿದನು.

ಹಾವು ತನ್ನ ಹೆಡೆಯನ್ನು ತಗ್ಗಿಸಿ ದಯಾಮಯನಿಗೆ ನಮಸ್ಕಾರ ಮಾಡಿ "ರಾಜನೇ, ನೀನು ನನಗೆ ಈದಿನ ಮಾಡಿದ ಉಪಕಾರವನ್ನು ಎಂದೂ ಮರೆಯಲಾರೆ" ಎಂದು ತನ್ನ ಕೃತಜ್ಞತೆಯನ್ನು ತಿಳಿಸಿ, ಮಾಯವಾಯಿತು. ದಯಾಮಯನು ತನ್ನ ಅರಮನೆ ಸೇರಿಕೊಂಡ.

ಕೆಲವು ದಿನಗಳು ಕಳೆದವು. ದಯಾಮಯನೆಂದರೆ ಆಗದ ಕೆಲ ಸಾಮಂತರು ಚಕ್ರವರ್ತಿಗೆ ಆತನಮೇಲೆ ಚಾಡಿ ಹೇಳಿ ದ್ವೇಷ



ವನ್ನು ಹುಟ್ಟಿಸಿದರು. ದಯಾಮಯನು ಆಗಾಗ್ಗೆ ವಿಂಧ್ಯಾರಣ್ಯಕ್ಕೆ ಹೋಗಿ ಅಲ್ಲಿನ ಭಿಲ್ಲರೊಂದಿಗೆ ಸಂಚು ಹೂಡುತ್ತಿರುವನೆಂತಲೂ, ಅವರೆಲ್ಲರನ್ನೂ ಜೊತೆಗೂಡಿಸಿ ಚಕ್ರವರ್ತಿಯ ಮೇಲೆ ಯುದ್ಧಕ್ಕೆ ಬರುವನೆಂತಲೂ, ಇಲ್ಲದ ಸಲ್ಲದ ವಿಷಯಗಳನ್ನು ಕಲ್ಪಿಸಿ ವರ್ಣಿಸಲು, ಚಕ್ರವರ್ತಿಗೆ ಅವರ ಮಾತುಗಳು ಸತ್ಯವೆಂದೇ ತೋರಿತು. ಆತನು ದಯಾಮಯನನ್ನು ಯಾವುದೋ ನೆಪದಿಂದ ಅರಮನೆಗೆ ಬರಮಾಡಿ ಕೊಂಡು ಆತನು ಏಕಾಂಗಿಯಾಗಿರುವಾಗ ಬಂಧಿಸಿ ಸೆರೆಯಲ್ಲಿಡಿಸಿದ.

'ನಾನೇನು ತಪ್ಪು ಮಾಡಿದೆನೆಂದು ನನಗೆ ಈ ಶಿಕ್ಷೆ' ಎಂದು ದಯಾಮಯನು ತನ್ನಲ್ಲಿ ತಾನು ಪ್ರಶ್ನಿಸಿಕೊಳ್ಳುತ್ತಾ ದಿನಗಳೆಯುತ್ತಿದ್ದನು. ಒಂದು ದಿನ ಅರ್ಧ ರಾತ್ರಿಯಲ್ಲಿ ತನ್ನ ಎದುರಾಗಿ ಏನೋ ಚಲಿಸುತ್ತಿರುವಂತೆ ತೋರಿತು. ನಿಧಾನವಾಗಿ ಪರಿಶೀಲಿಸಿನೋಡಲು ಅದೊಂದು ಸರ್ಪವಾಗಿತ್ತು.

ಅದು ತನ್ನ ಹೆಡೆಯನ್ನು ಎತ್ತಿ ದಯಾಮಯನೊಂದಿಗೆ "ಎಲೈ ರಾಜನೇ ನನ್ನನ್ನು ಮರೆತುಬಿಟ್ಟೆಯಾ? ಅಂದು ಅಡವಿಯಲ್ಲಿ ಕಿರಾತನ ಕೈಯಿಂದ ಕಾಪಾಡಿದ ಸರ್ಪ ನಾನಲ್ಲವೇ?" ಎಂದಿತು.

"ಓಹೋ, ನೀನೇ? ಇಲ್ಲಿಗೇಕೆ ಬಂದೆ? ಕಾವಲುಗಾರರು ನಿನ್ನನ್ನು ನೋಡಿದರೆ ಕೊಂದು ಬಿಟ್ಟಾರು. ಇಲ್ಲಿಂದ ಮೊದಲು ಹೋಗು" ಎಂದ ದಯಾಮಯ.





"ರಾಜನೇ ಪರವಾಯಿಲ್ಲ. ನನ್ನನ್ನ ಅಂದು ನೀನ ಸೆರೆಯಿಂದ ಬಿಡಿಸಿದೆ. ಇಂದು ನಾನು ನಿನ್ನನ್ನ ಸೆರೆಯಿಂದ ಬಿಡಿಸಲೋಸುಗ ಬಂದೆ" ಎಂದಿತ ಹಾವು. ದಯಾನಂದನು ಅದಕ್ಕೆ "ಹೆಚ್ಚನೇ—ನನ್ನನ್ನು ನೀನು ಬಿಡಿಸಲಾರೆ. ಏಕೆಂದರೆ ನನಗಾದವರು ಯಾರೂ ನನಗೆ ಪ್ರತಿಕೂಲವಾಗಿ ಚಕ್ರವರ್ತಿಯ ಕಿವಿಯಲ್ಲಿ ಊದಿದ ವಿಷ ತುಂಬಾ ಕೆಟ್ಟದ್ದು. ಆ ವಿಷಕ್ಕೆ ನಿನ್ನ ಕೋರೆಗಳಲ್ಲಿರುವ ವಿಷಕ್ಕೂ ಹೋಲಿಕೆಯೇ ಇಲ್ಲ" ಎಂದ.

ನಾಗವು ಅದಕ್ಕೆ ಅಂದಿತು. "ನೀನು ಹೇಳಿದ ಮಾತು ನಿಜವೇ ಇರಬಹದು. ಆದರೂ ನಿನ್ನನ್ನ ಕಾಪಾಡಬಲ್ಲೆ. ಉಪಾಯದಿಂದ, ಯುಕ್ತಿಯಿಂದ ಎಲ್ಲವನ್ನೂ ಸಾಧಿಸಬಹುದಲ್ಲವೇ? ನಿನ್ನನ್ನು ಸೆರೆಯಿಂದ ಬಿಡಿಸಲು ಒಂದು ಉಪಾಯವನ್ನ ಯೋಚಿಸಿಕೊಂಡು ಬಂದಿದ್ದೇನೆ" ಎಂದಿತು.

"ಏನದು?" ಎಂದು ಕೇಳಿದ ದಯಾನಂದ.

"ಬೆಳಗಾಗುವ ಮುನ್ನವೇ ನಾನು ಚಕ್ರವರ್ತಿಯ ಅಂತಃಪುರವನ್ನು ಸೇರಿ, ಆತನು ಎಚ್ಚರವಾಗುವ ವೇಳೆಗೆ ಆತನ ಕಂಠಕ್ಕೆ ಸುತ್ತಿಕೊಂಡಿರುತ್ತೇನೆ. ನನ್ನನ್ನು ಸಾಯಿಸಲು ಕತ್ತಿ ಕಠಾರಿಗಳನ್ನು ತರುವರು. ಆದರೆ ನಾನು ಚಕ್ರವರ್ತಿಯ ಕಂಠವನ್ನು ಸುತ್ತಿಕೊಂಡು ಇರುವುದರಿಂದ ನನ್ನನ್ನು ಹೊಡೆದರೆ ನನ್ನ ಪ್ರಾಣದೊಂದಿಗೆ ಚಕ್ರವರ್ತಿಯ ಪ್ರಾಣವೂ ಸಹ ಹೋಗುವುದರಿಂದ ಯಾರೂ ನನ್ನಮೇಲೆ ಕೈ ಹಾಕುವ ಗೋಜಿಗೆ ಹೋಗಲಾರರು. "ಚಕ್ರವರ್ತಿಗೆ ಅಪಾಯವಾಗದಂತೆ ಸರ್ಪದ ದವಡೆಯಿಂದ ಆತನನ್ನ ರಕ್ಷಿಸುವ ಮಂತ್ರಗಾರರು ಯಾರೂ ಇಲ್ಲವೇ" ಎಂದು ಅವರು ಹುಡುಕಾಡಲು ಪ್ರಾರಂಭಿಸುವರು. ಆಗ ನೀನು "ಮಂತ್ರಪ್ರಭಾವದಿಂದ ಸರ್ಪವನ್ನು ವಶಮಾಡಿಕೊಂಡು ಚಕ್ರವರ್ತಿಯನ್ನು ಕಾಪಾಡಬಲ್ಲೆ. ನಾನು ಅಡವಿಗಳಲ್ಲಿ ಓಡಾಡುವವನು. ನನಗೆ ಈ ಮಂತ್ರಗಳು ಗೊತ್ತು" ಎಂದು ಹೇಳು. ಆಗ ನಿನ್ನ ಆಜ್ಞಾನುಸಾರ ನಾನು ವರ್ತಿಸುವೆನು" ಎಂದು ಹಾವು ತನ್ನ ಉಪಾಯವನ್ನ ಆತನಿಗೆ ತಿಳಿಯಪಡಿಸಿ ಮಾಯವಾಯಿತು. ಅದೇ ಪ್ರಕಾರವೇ ದಯಾನಂದನು ಮಾಡಲು ಸಿದ್ಧನಾದ.

ಸೂರ್ಯೋದಯವಾಗುವ ವೇಳೆಗೆ ಚಕ್ರ

ವರ್ತಿಯು ಅಂತಃಪುರದಿಂದ ಹಾಹಾಕಾರವು ಕೇಳಿಬಂತು. ದಯಾಮಯನು ಪಹರೆಯವರನ್ನು ಕುರಿತು "ಏನದು" ಎಂದು ಏನೂ ಅರಿಯದವನಂತೆ ಕೇಳಿ ವಿಷಯವನ್ನು ತಿಳಿದುಕೊಂಡು "ನಾನು ಚಕ್ರವರ್ತಿಯನ್ನು ಆ ಆಪತ್ತಿನಿಂದ ತಪ್ಪಿಸಬಲ್ಲೆ" ಎಂದ. ಈ ಸುದ್ದಿ ಅಂತಃಪುರಕ್ಕೆ ಹೋಯಿತು. ಅಲ್ಲಿದ್ದ ರೆಲ್ಲಾ ಸೆರೆಮನೆಗೆ ಓಡೋಡಿ ಬಂದು, ದಯಾಮಯನನ್ನು ಭುಜಗಳಮೇಲೇರಿಸಿಕೊಂಡು, ರಾಜನ ಸನ್ನಿಧಿಗೆ ಕರೆಸಿಕೊಂಡು ಹೋದರು.

ಚಕ್ರವರ್ತಿ ಗಡಗಡನೆ ನಡುಗುತ್ತಾ "ದಯಾಮಯ, ನಿನ್ನನ್ನು ಸೆರೆಯಲ್ಲಿರಿಸಿದೆನೆಂಬ ಕೋಪದಿಂದ ಉಪೇಕ್ಷೆಮಾಡದೆ ಈ ಕ್ರೂರಸರ್ಪದಿಂದ ನನ್ನನ್ನು ಕಾಪಾಡು" ಎಂದು ಪ್ರಾರ್ಥಿಸಿದ.

ಹೆಡೆಯ ನೆತ್ತಿ ಯಾರನ್ನೂ ಹತ್ತಿರಸೇರಿಸದೆ ಬುಸಗುಡುತ್ತಿದ್ದ ಸರ್ಪರಾಜನನ್ನು ನೋಡಿ ದಯಾಮಯನು "ನಾಗರಾಜಾಯ ನಮಃ" ಎಂದು, ಸುತ್ತಲೂ ನೆರೆದಿದ್ದ ಜನರೊಂದಿಗೆ "ಮಹನೀಯರೇ, ಈ ಸರ್ಪರಾಜನನ್ನು ಕಳುಹಿಸಿಬಿಡುವೆನು. ಹೋಗುತ್ತಿರುವಾಗ ಯಾರೂ ಈತನಿಗೆ ಹಾನಿಯನ್ನುಂಟು ಮಾಡಕೂಡದು" ಎಂದ.

ಆಗ ಅವರೆಲ್ಲ ತಮ್ಮ ತಮ್ಮ ಹತ್ತಿರವಿದ್ದ ದೊಣ್ಣೆ, ಕಠಾರಿ ಮುಂತಾದುವನ್ನು ಒಂದು ಮೂಲೆಗೆ ಬಿಸಾಡಿದರು. ದಯಾಮಯನು ಹಾವಿನಕಡೆ ತಿರುಗಿ "ಹಾಂ ಹ್ರೀಂ, ಹ್ರಾಂ, ಫಟ್, ಸ್ವಾಹಾ" ಎಂದು ಚಿಟಕಿ ಹಾಕಿ "ಎಲೈ ಭುಜಂಗೋತ್ತಮನೇ, ವಿಂಧ್ಯಾರಣ್ಯದಲ್ಲಿ ದೊಡ್ಡದೊಂದು ಆಲದಮರದ ಕೆಳಗೆ ನಿನ್ನ ಹುತ್ತವಿದೆ. ನೆಟ್ಟಗೆ ಅಲ್ಲಿಗೆ ಹೊರಟುಬಿಡು" ಎಂದ.

ಆ ಆಜ್ಞೆಗಾಗಿಯೇ ಎದುರು ನೋಡುತ್ತಿದ್ದ ನಾಗರವು ಚಕ್ರವರ್ತಿಯ ಕೊರಳಿನಿಂದ ಮೆಲ್ಲನೆ ಎಲ್ಲರೂ ನೋಡುತ್ತಿದ್ದಂತೆಯೇ ಕೆಳಗಿಳಿದು ಮಾಯವಾಯಿತು.

ಚಕ್ರವರ್ತಿ ದಯಾಮಯನ ಕಾಲಿಗೆ ಬಿದ್ದು ಪ್ರಾಣಭಿಕ್ಷೆ ಕೊಟ್ಟುದುದಕ್ಕೆ ತನ್ನ ಕೃತಜ್ಞತೆ ತೋರಿಸಿ, ತನ್ನ ಅಪರಾಧಕ್ಕೆ ಕ್ಷಮಾಪಣೆ ಕೇಳಿಕೊಂಡು, ಅನೇಕ ಕಾಣಿಕೆಗಳನ್ನೂ ಬಹುಮಾನಗಳನ್ನೂ ಕೊಟ್ಟು ಗೌರವಮಾಡಿ, ಆತನ ರಾಜ್ಯಕ್ಕೆ ಕಳುಹಿಸಿಕೊಟ್ಟನು.






ಅದೊಂದು ಬಹಳ ದೂರ ದೇಶ. ಆ ದೇಶದಲ್ಲಿ ಪ್ರಜೆಗಳೇನೋ ಇದ್ದರು. ಆದರೆ ಅದನ್ನು ಪರಿಪಾಲಿಸುವ ರಾಜನಿರಲಿಲ್ಲ. ರಾಜನಿಲ್ಲದಿದ್ದುದರಿಂದ ಆ ದೇಶದ ಪ್ರಜೆಗಳು ತಮ್ಮ ಇಷ್ಟಾನುಸಾರ ವರ್ತಿಸುತ್ತಿದ್ದರು. ಈ ರೀತಿ ನಾಥನಿಲ್ಲದ ರಾಜ್ಯಕ್ಕೆ ಅನಾಥ ರಾಜ್ಯ ಎಂದು ಹೆಸರು ಬಂತು.

ಕಾಲಕ್ರಮೇಣ ಆ ದೇಶಕ್ಕೆ ರಾಜರು ಬಂದರು. ಪರಿಪಾಲನೆ ಮಾಡಿದರು. ಪ್ರಜೆಗಳನ್ನು ಒಂದು ಹದ್ದುಬಸ್ತಿಗೆ ತಂದಿರಿಸಿ ಅವರಿಗೆ ಸರ್ವ ಸೌಖ್ಯಗಳು ಲಭಿಸುವಂತೆ ಅನುಕೂಲಗಳನ್ನು ಮಾಡಿಕೊಟ್ಟರು. ಇಷ್ಟೊಂದು ಬದಲಾವಣೆಗಳಾದರೂ ಆ ದೇಶಕ್ಕೆ ಅನಾದಿಕಾಲದಿಂದ ಬಂದ ಅನಾಥ ರಾಜ್ಯವೆಂಬ ಹೆಸರು ಮಾತ್ರ ಹಾಗೇ ಇದ್ದುಬಿಟ್ಟಿತು.

ಆ ಅನಾಥ ರಾಜ್ಯವನ್ನು ಆಳಿದವರಲ್ಲಿ ಕೃಪಾಸಿಂಹನೊಬ್ಬ. ಕೃಪಾಸಿಂಹನು ತನ್ನ ಪರಿಪಾಲನೆಯಲ್ಲಿ ಪ್ರಜೆಗಳ ಕ್ಷೇಮಕ್ಕಾಗಿ ಅನೇಕ ಸುಧಾರಣೆಗಳನ್ನು ಮಾಡಿದ. ಆದರೆ ಹಿಂದಿನಿಂದ ನಡೆದು ಬರುತ್ತಿದ್ದ ಕೆಲವಾರು ವಿಚಿತ್ರ ಪದ್ಧತಿಗಳನ್ನು ಮಾತ್ರ ತೊಡೆದು ಹಾಕಲು ಅಶಕ್ತನಾದ. ಅಂತಹ ವಿಚಿತ್ರ ಆಚಾರಗಳಲ್ಲಿ ನಾಮಕರಣ ಮಹೋತ್ಸವವೂ ಒಂದು.

ಅನಾಥರಾಜ್ಯದಲ್ಲಿ, ರಾಜವಂಶದಲ್ಲಿ ಜನಿಸಿದ ಯಾರೇ ಆಗಲೀ ನಮ್ಮ ಹಾಗೆ ಹೆಸರಿಟ್ಟುಕೊಳ್ಳುವ ಸ್ವಾತಂತ್ರ್ಯವಿಲ್ಲ. ಒಂದು ಶಿಶು ಜನಿಸಿತೆಂದರೆ ಅಂದೇ ನಾಮಕರಣ ಮಹೋತ್ಸವವು ನಡೆಯಬೇಕು. ಆ ಮಹೋತ್ಸವಕ್ಕೆ ಸುತ್ತಮುತ್ತಲಿನ ರಾಜರೆಲ್ಲ ಬರುವರು. ಪ್ರತಿಯೊಬ್ಬ ರಾಜನೂ ಒಂದೊಂದು ಹೆಸರನ್ನು ಸೂಚಿಸುವನು. ಆ ಹೆಸರುಗಳೆಲ್ಲವನ್ನೂ ಒಂದು ವಿಶೇಷ ಗ್ರಂಥದಲ್ಲಿ ಬರೆದು, ಅದನ್ನು ಭದ್ರಪಡಿಸುವರು. ಹದಿನಾರು ವರ್ಷ





ಒಬ್ಬ ಮಗನಿಲ್ಲವಲ್ಲಾ' ಎಂದು ಜನ ಕಳವಳ ಪಡುತ್ತಿದ್ದರು. ಆದರೆ ರಾಜ್ಯದಲ್ಲೆಲ್ಲಾ ಇದಕ್ಕಾಗಿ ಸಂತೋಷಪಡುವ ಒಂದೇ ಒಂದು ವ್ಯಕ್ತಿಯಿತ್ತು. ಆ ವ್ಯಕ್ತಿಯೇ ರಾಣಿಯ ಸಹೋದರ ಶಕ್ತಿಸಿಂಹ.

ರಾಜ ಮತ್ತು ರಾಣಿ ಸಂತತಿಗಾಗಿ ಕಳವಳಿಸುತ್ತಿದ್ದರು. ಶಕ್ತಿಸಿಂಹನು ಮಾತ್ರ ಅವರಿಗೆ ಮಕ್ಕಳಾಗಕೂಡದೆಂದು ಕಂಡ ಕಂಡ ದೇವರಿಗೆ ಕೈಮುಗಿಯುತ್ತಿದ್ದನು. 'ತನ್ನ ಭಾವ ಇನ್ನೆಷ್ಟುಕಾಲ ಜೀವಿಸುವನು? ಆತನ ತರುವಾಯ ನನ್ನನ್ನೇ ಅಲ್ಲವೇ ತನ್ನ ಸಿಂಹಾಸನವನ್ನು ಅಲಂಕರಿಸುವಂತೆ ಕೇಳುವಳು' ಎಂದು ಆತನು ಎಣಿಸುತ್ತಿದ್ದ. ಆದರೆ ತಾನೊಂದು ಬಗೆದರೆ ದೈವವೊಂದು ಬಗೆಯಿತು.

ಕೃಪಾಸಿಂಹನ ತಪಸ್ಸಿದ್ಧಿ ಫಲಿಸಿ ರಾಣಿ ದೇವಪ್ರಿಯೆಯು ಗರ್ಭವನ್ನು ತಾಳಿದಳು. ಇದು ತಿಳಿದಕೂಡಲೇ ಶಕ್ತಿಸಿಂಹನ ಎದೆಯ ಮೇಲೆ ಕಲ್ಲು ಹೇರಿದಂತಾಯಿತು. ರಾಜ್ಯದಲ್ಲಿ ಪ್ರಜೆಗಳೆಲ್ಲಾ ಶುಭ ಸಮಾಚಾರವನ್ನು ಕೇಳಲು ಕುತೂಹಲದಿಂದ ಇದ್ದರು. ಶಕ್ತಿಸಿಂಹನು ಮಾತ್ರ ಒಳಗೊಳಗೆ ಬೆಂದುಬೇಯುತ್ತಿದ್ದಾನೆ. ತಾನು ಕಟ್ಟಿಕೊಂಡ ಕನಸಿನ ಮನೆ ಕುಸಿದು ಬೀಳುವಂತಿದೆ. ಈಗೇನು ಮಾಡಲಿ? ಎಂದು ದೀರ್ಘಾಲೋಚನೆಯಲ್ಲಿ ಬಿದ್ದ.

ಇನ್ನು ನಾಳೆಯೋ ನಾಳಿದ್ದೋ ಹೆರಿಗೆ ಎನ್ನುವಾಗ ಆತನು ಒಂದು ರಾತ್ರಿ ಅಂತಃಪುರದ ಮುಖ್ಯ ದಾದಿಯನ್ನು ರಹಸ್ಯವಾಗಿ ಕರೆದು

ವಯಸ್ಸಾಗುವವರೆವಿಗೂ ಆ ಮಗುವನ್ನು 'ರಾಜಕುಮಾರ' ಎಂದು ಮಾತ್ರ ಕರೆಯುವರು. ಹದಿನಾರನೇ ವಯಸ್ಸು ಬಂದ ಕೂಡಲೇ ಆ ಗ್ರಂಥದಲ್ಲಿರುವ ಹೆಸರುಗಳನ್ನು ತೋರಿಸಿ, ಆತನಿಗೆ ಇಷ್ಟಬಂದ ಹೆಸರನ್ನು ಆರಿಸಿಕೊಳ್ಳುವಂತೆ ಹೇಳುವರು. ಈ ರೀತಿ ರಾಜಕುಮಾರನು ಹೆಸರನ್ನು ಆರಿಸಿಕೊಂಡು ಪ್ರಜೆಗಳಿಗೆ ತಿಳಿಯಪಡಿಸಿದರೆ, ಅಂದಿನಿಂದ ಆ ಹೆಸರಿನಿಂದಲೇ ರಾಜಕುಮಾರನು ಕರೆಯಲ್ಪಡುವನು.

ಕೃಪಾಸಿಂಹನ ಪರಿಪಾಲನೆ ಸುವ್ಯವಸ್ಥೆಯಿಂದ ಕೂಡಿತ್ತು. ಆದರೆ ಐವತ್ತು ವರ್ಷಗಳಾದರೂ ಸಂತತಿ ಇಲ್ಲದಿದ್ದ ಪ್ರಯುಕ್ತ ಆತನಿಗೂ, ಆ ರಾಜ್ಯದ ಪ್ರಜಾಸಮುದಾಯಕ್ಕೂ ಒಂದು ಕೊರತೆಯಾಗಿತ್ತು. 'ನಮ್ಮ ರಾಜನಿಗೆ



“ನನಗೆ ನಿನ್ನಿಂದ ದೊಡ್ಡ ಉಪಕಾರವಾಗ ಬೇಕಾಗಿದೆ. ನಾಳೆಯೋ ನಾಳಿದ್ದೋ ನಮ್ಮ ಅಕ್ಕ ಮಗುವನ್ನು ಹೆರುತ್ತಾಳೆ. ಅದು ಹೆಣ್ಣು ಮಗುವಾದರೆ ಯಾವ ತಂಟೆಯೂ ಇಲ್ಲ. ಗಂಡು ಮಗುವಾದ ಪಕ್ಷಕ್ಕೆ ಮಾತ್ರ, ಸಮಯ ನೋಡಿ ಯಾರಿಗೂ ತಿಳಿಯದಂತೆ ಈ ವಿಷ ವನ್ನು ಕೊಟ್ಟು ಬಿಡಬೇಕು” ಎಂದು ಒಂದು ಸಣ್ಣ ಪೊಟ್ಟಣವನ್ನು ಅವಳ ಕೈಗೆ ಕೊಟ್ಟನು. ತನಗೆ ರಾಜ್ಯ ಲಭಿಸುವುದೆಂತಲೂ, ತಾನು ಪಟ್ಟಕ್ಕೆ ಏರಿದ ತರುವಾಯ ಬೇಡಿದ ಬಹು ಮಾನಗಳನ್ನು ಕೊಡುವೆನೆಂತಲೂ ಆ ದಾದಿಗೆ ಅನೇಕ ವಿಧದಲ್ಲಿ ಆಶೆ ಹುಟ್ಟಿಸಿದ.

ಪ್ರಜೆಗಳ ಅದೃಷ್ಟ ಹಣ್ಣಾಗಿ ಕೃಪಾಸಿಂಹ ನಿಗೆ ಮಗನೇ ಹುಟ್ಟಿದ. ನಾಮಕರಣ ಮಹೋತ್ಸವಕ್ಕೆ ಏರ್ಪಾಟುಗಳು ತುಂಬಾ ವೈಭವವಾಗಿ ನಡೆದವು. ಪಟ್ಟಣವೆಲ್ಲಾ ತಳಿರು ತೋರಣಗಳಿಂದ ಕಳಕಳಿಸುತಿತ್ತು. ಆಜೂ ಬಾಜೂ ರಾಜರೆಲ್ಲರೂ ಬಂದರು. ದರ್ಬಾರು ಕಿಟಕಿಟನೆ ಜನರಿಂದ ಕೂಡಿತ್ತು. ಈ ಮಹೋ ತ್ಸವವನ್ನು ಜಯಪ್ರದವಾಗಿ ನಡೆಸುವ ಬಾಧ್ಯತೆಯೆಲ್ಲಾ ಶಕ್ತಿಸಿಂಹನಿಗೆ ವಹಿಸಿದ್ದ ರಾಜ. ಶಕ್ತಿಸಿಂಹ ತನ್ನ ಅಸಮಾಧಾನ ವನ್ನು ಸ್ವಲ್ಪವೂ ಹೊರಗೆ ತೋರ್ಪಡಿಸಲಿಲ್ಲ.

ಹೆರಿಗೆ ಆದಕೂಡಲೇ ಆಸ್ಥಾನ ವೈದ್ಯನು ರಾಣಿಯ ನಾಡಿ ಪರೀಕ್ಷಿಸಿದ. ಎಲ್ಲಾ ಸರಿ ಯಾಗಿಯೇ ಇದೆ ಎಂದ. ಬಾಣಂತಿಗೆ ಅಗತ್ಯ






ವಾದ ಔಷಧಿಗಳನ್ನು ಕೊಟ್ಟು, ದರ್ಬಾರಿನಲ್ಲಿ ನಡೆಯಲಿರುವ ಮಹೋತ್ಸವಕ್ಕೆ ಆತನೂ ಹೋದ. ಅಲ್ಲಿ ರಾಜನು ಅತಿಥಿಗಳನ್ನೆಲ್ಲಾ ತಾನೇ ಸ್ವತಃ ಆಹ್ವಾನಿಸುತ್ತಿದ್ದಾನೆ.

ಮಹೋತ್ಸವಕ್ಕೆ ಬರಬೇಕಾದವರೆಲ್ಲಾ ಬಂದುಬಿಟ್ಟರು. ಮಗುವಿನ ಹೆಸರು ಬರೆಯಲು ದರ್ಬಾರಿನಲ್ಲಿ ಗ್ರಂಥ ಸಿದ್ಧವಾಗಿ ಇಡಲಾಗಿತ್ತು. ಮಹೋತ್ಸವಕ್ಕೆ ಬಂದ ಅಜೂಬಾಜೂ ರಾಜರೆಲ್ಲಾ ಅವರವರು ಯೋಚಿಸಿಕೊಂಡು ಬಂದ ಹೆಸರುಗಳನ್ನು ಯಾವಾಗ ಬರೆಯುವೆವೋ ಎಂದು ಕಾತುರಭಾವದಿಂದ ಕಾದಿದ್ದಾರೆ. ಎಲ್ಲಾ ತಯಾರಾಗಿದೆ. ಇನ್ನು ರಾಣಿ ಬರುವುದೊಂದೇ ಬಾಕಿ.

ಅಲ್ಲಿ ಅಂತಃಪುರದಲ್ಲಿ ರಾಣಿಗೆ ಯಾವಾಗ ಜೊಂಪು ಹಿಡಿಯುವುದೋ, ಯಾವಾಗ ವಿಷವನ್ನು ಕಲೆಸಿ ಮಗುವಿಗೆ ಕೊಡೋಣವೋ ಎಂದು ದಾದಿ ಕಾದುಕೊಂಡಿದ್ದಳು. ಆಕೆ ಹಾಗೆ ಕಣ್ಣು ಮುಚ್ಚಿದಳೋ ಇಲ್ಲವೋ, ಸೊಂಟದಲ್ಲಿ ಸಿಕ್ಕಿಸಿಕೊಂಡಿದ್ದ ವಿಷದ ಪೊಟ್ಟಣವನ್ನು ತೆಗೆಯಲು ಸಿದ್ಧಳಾದಳು ದಾದಿ. ಇಷ್ಟರಲ್ಲಿ ರಾಜನು ಕಳುಹಿಸಿದ ಪರಿಚಾರಿಕೆಯೊಬ್ಬಳು ಬಂದು ಕೊಠಡಿಯ ಹೊಸಲಿನ ಬಳಿನಿಂತು "ಅಮ್ಮಾ, ಎಲ್ಲರೂ ತಮ್ಮ ಆಗಮನವನ್ನು ನಿರೀಕ್ಷಿಸುತ್ತಿರುವರು" ಎಂದು ಹೇಳಿದಳು.

ದಾದಿ ಬೆಚ್ಚಿಬಿದ್ದಳು. ಸೊಂಟದಲ್ಲಿದ್ದ ಪೊಟ್ಟಣ ತೆಗೆಯಲೇ ಇಲ್ಲ. ರಾಣಿಯನ್ನು ಎಬ್ಬಿಸಿ "ಮಹಾರಾಜರು ಸುದ್ದಿ ಕಳುಹಿಸಿದ್ದಾರೆ. ಶೃಂಗಾರ ಮಾಡಿಕೊಂಡು ಬೇಗ ಹೊರಡಬೇಕು" ಎಂದು ಅವಸರಪಡಿಸಿದಳು.

ರಾಣಿ ಹಾಸಿಗೆಯಿಂದ ಎದ್ದಳು. ಶೃಂಗಾರ ಮಾಡಿಕೊಂಡಳು. ಈ ಸಮಯನೋಡಿ ದಾದಿ ವಿಷವನ್ನು ಮಗುವಿಗೆ ಕೊಡುವ ಹಾಲಿನಲ್ಲಿ ಬೆರೆಸಿಬಿಟ್ಟಳು. ತೊಟ್ಟಿಲಲ್ಲಿ ಮಲಗಿದ್ದ ಮಗುವನ್ನೆತ್ತಿಕೊಂಡು, ಇನ್ನೇನು ಹಾಲು ಕುಡಿಸಬೇಕೆನ್ನುವಾಗ ಮತ್ತೆ ಸುದ್ದಿ ಬಂತು ಎಲ್ಲರೂ ಕಾದಿರುವರೆಂದು.

ಈ ಸಾರಿ ಸುದ್ದಿ ಕೇಳಿದಕೂಡಲೇ ರಾಣಿ "ಲೇ, ದಾದಿ, ನೀನು ಮಗುವನ್ನು ಎತ್ತಿಕೊಂಡು ಮುಂದೆ ನಡೆಯುತ್ತಿರು. ಹಿಂದೆಯೇ ಬರುತ್ತಿರುವೆನೆಂದು ಮಹಾರಾಜರಲ್ಲಿ ಮನವಿ ಮಾಡು" ಎಂದಳು. ದಾದಿ ಮರುಮಾತನ್ನಾಡದೆ, ಮಗುವನ್ನು ಎತ್ತಿಕೊಂಡು ದರ್ಬಾ

ರಿಗೆ ಹೊರಟಳು. ಮುಂದೆ ದಾಸಿ ಜನ ಸಾಲಾಗಿ ನಡೆಯುತ್ತಿದ್ದಾರೆ. ದಾದಿ ಒಂದು ಕೈಯಲ್ಲಿ ಮಗುವನ್ನು ಎತ್ತಿಕೊಂಡು ಮುಂದೆ ನಡೆಯುತ್ತಿದ್ದ ಪರಿಜನವನ್ನು ಎರಡನೇ ಕೈಯಿಂದ ತಳ್ಳಿಕೊಂಡು ಅವರ ಹಿಂದೆ ಹೋಗುತ್ತಿದ್ದಾಳೆ. ಅವರು ದರ್ಬಾರನ್ನು ಸಮೀಪಿಸಿದರು. ಬಾಗಿಲಲ್ಲಿ ಶಕ್ತಿಸಿಂಹ ನಿಂತಿದ್ದಾನೆ. ತಾನು ಹೇಳಿದ ಕೆಲಸ ಪೂರ್ತಿಮಾಡಿ, ಮಗು ಸತ್ತುಹೋಯಿತೆಂಬ ಸುದ್ದಿ ತರುವಳೆಂದು ಉತ್ಸುಕತೆಯಿಂದ ದಾದಿಗಾಗಿ ಅವನು ಎದುರು ನೋಡುತ್ತಿದ್ದ. ಆದರೆ ಅದಕ್ಕೆ ಬದಲಾಗಿ ಈಗ ಮಗುವನ್ನು ಎತ್ತಿಕೊಂಡು ದಾದಿ ಬರುವುದನ್ನು ಕಂಡಕೂಡಲೇ ಅವನು ಉರಿದುಬಿದ್ದ. ನಿಂತಿದ್ದ ಸ್ಥಳದಿಂದಲೇ ದಾದಿಯನ್ನು ತೀವ್ರವಾಗಿ ನೋಡಿದ.

ಅವಳು ಬೆದರಿಬಿಟ್ಟಳು. ಗಾಬರಿಯಲ್ಲಿ ಮಗು ಕೈಯಿಂದ ಕೆಳಗೆ ಜಾರಿಬಿದ್ದು ಕಿಟಾರನೆ ಕಿರಿಚಿತು. ಆದರೆ ಮೇಳತಾಳಗಳಿಂದ ಮೊಳಗುತ್ತಿದ್ದ ಆ ಸಮಯದಲ್ಲಿ ಮಗುವಿನ ಅಳು ಯಾರಿಗೆ ಕೇಳಿಸುವುದು.

ದಾದಿಯ ಮೈ ಕಂಪಿಸಿತು. ತಟ್ಟನೆ ಮಗುವನ್ನು ಎತ್ತಿಕೊಂಡಳು. ಎಲ್ಲರೂ ದರ್ಬಾರನ್ನು ಸೇರಿಕೊಂಡರು. ರಾಣಿಯವರು ಹಿಂದೆಯೇ ಬರುತ್ತಿರುವರೆಂದು ರಾಜನಿಗೆ ಮನವಿ ಮಾಡಿಕೊಂಡಳು.

ಇದನ್ನು ಕೇಳಿ ರಾಜನು ಆಶ್ಚರ್ಯ






ಗೊಂಡನು "ಸುದ್ದಿಮೇಲೆ ಸುದ್ದಿ ಕಳುಹಿಸಿದರೂ ರಾಣಿ ಇದುವರೆವಿಗೂ ಬರಲಿಲ್ಲ. ಮಗುವನ್ನು ಮಾತ್ರ ಒಂಟಿಯಾಗಿ ಕಳುಹಿಸಿದಾಳೆ. ಒಂದುವೇಳೆ ಮೈ ಹುಷಾರಿಲ್ಲವೇನೋ! ತಾವೊಂದುಬಾರಿ ಹೋಗಿ ರಾಣಿಯರನ್ನು ನೋಡಿಕೊಂಡು ಬನ್ನಿ" ಎಂದು ಆಸ್ಥಾನ ವೈದ್ಯನನ್ನು ಅಂತಃಪುರಕ್ಕೆ ಕಳುಹಿಸಿದ.

ಆಸ್ಥಾನ ವೈದ್ಯನು ಹೋಗಿ ರಾಣಿಯನ್ನು ಕಂಡು ತಾನು ಬಂದ ಕಾರ್ಯವನ್ನು ಕುರಿತು ಮನವಿ ಮಾಡಿಕೊಂಡ. ರಾಣಿ ಕಿರುನಗೆಬೀರಿ "ಮತ್ತೇನಿಲ್ಲ. ತುಸ ಬಳಲಿಕೆಯಾಗಿದೆ. ಆದ್ದರಿಂದ ಮಗುವನ್ನು ಮೊದಲು ಕಳುಹಿಸಿದೆ. ನಿಮಗೆ ಅನವಸರವಾಗಿ ತೊಂದರೆ ಕೊಟ್ಟೆ" ಎಂದು ನೊಂದುಕೊಂಡಳು.

"ದೊಡ್ಡಮಾತು, ತುಂಬಾ ದೊಡ್ಡಮಾತು ಪ್ರಭುಗಳ ಸೇವೆಗಿಂತಲೂ ನಮಗೆ ಬೇಕಾದುದಾದರೂ ಏನಿದೆ? ತಾವು ಈ ಔಷಧವನ್ನು ತೆಗೆದುಕೊಳ್ಳಿ. - ಸುಸ್ತು ಕಡಿಮೆಯಾಗಿ ಹೊಸ ಚೈತನ್ಯವುಂಟಾಗುತ್ತದೆ" ಎಂದು ಆಸ್ಥಾನ ವೈದ್ಯನು ಒಂದು ಔಷಧವನ್ನು ಕೊಟ್ಟ.

ರಾಣಿ ಅದನ್ನು ಇಸುಕೊಳ್ಳುತ್ತಾ "ಇನ್ನು ತಾವು ಹೊರಡಿ. ಒಂದು ಕ್ಷಣದಲ್ಲಿ ನಾನು ಬಂದು ಸೇರುವೆನೆಂದು ನಾನು ಹೇಳಿದಂತೆ ಮಹಾರಾಜರಿಗೆ ತಿಳಿಸಿ" ಎಂದು ಹೇಳಿದಳು.

ಆಸ್ಥಾನ ವೈದ್ಯನು ಹಿಂತಿರುಗಿ ಬಂದು "ಮತ್ತೇನಿಲ್ಲ ಮಹಾರಾಜ. ಹಸಿ ಬಾಣಂತಿಯಾದುದರಿಂದ ತುಸ ಬಳಲಿಕೆಯಿಂದಿದ್ದಾರೆ. ಅದು ಕಡಿಮೆಯಾಗಲು ಔಷಧಿಯನ್ನು ಕೊಟ್ಟು ಬಂದಿದ್ದೇನೆ. ಮತ್ತೊಂದು ಕ್ಷಣದಲ್ಲಿ ಅವರು ಇಲ್ಲಿಗೆ ಬಂದುಬಿಡುವರು" ಎಂದು ಹೇಳಿದ. ರಾಜನ ಮನಸ್ಸು ಆಗ ನೆಮ್ಮದಿ ಹೊಂದಿತು.

ಶುಭ ಮುಹೂರ್ತಕ್ಕೆ ಇನ್ನೊಂದು ಅರ್ಧ ಗಂಟೆ ಮಾತ್ರ ಉಳಿದಿದೆ. ಆದರೂ ರಾಣಿ ಬರುವ ಸೂಚನೆ ಕಾಣಿಸಲಿಲ್ಲ. ಆದ್ದರಿಂದ "ನೀನೇ ಹೋಗಿ ರಾಣಿಯನ್ನು ಕರೆದುಕೊಂಡು ಬಾ" ಎಂದು ರಾಜನು ದಾದಿಯನ್ನು ಕಳುಹಿಸಿದ. ಮಗುವನ್ನು ಎತ್ತಿಕೊಂಡೇ ದಾದಿ ಮತ್ತೆ ಅಂತಃಪುರಕ್ಕೆ ಹೋದಳು.

ರಾಣಿಯು ಶಯ್ಯಾ ಗೃಹವನ್ನು ಸಮೀಪಿಸುತ್ತಿರುವಾಗ ಒಳಗಿನಿಂದ ವೃದ್ಧಳೊಬ್ಬಳು ಹೊರಗೆ ಬಂದಳು. ಈಕೆ ಯಾರಿಗೂ ತಿಳಿಯದ ಹೊಸವ್ಯಕ್ತಿ. ಆಕೆ ದಾದಿಯನ್ನು ದುರು

ಗುಟ್ಟಿಕೊಂಡು ನೋಡಿ "ಮಗುವನ್ನು ಮತ್ತೆ ಬೀಳಿಸಿಯಾ, ಜಾಗ್ರತೆ" ಎಂದು ಎಚ್ಚರಿಸಿದಳು.

ಈ ಮಾತು ಕೇಳಿ ದಾದಿ ಬೆಚ್ಚಿಬಿದ್ದಳು. "ಯಾರು ನೀನು? ಅಂತಃಪುರದೊಳಿಗೆ ಪ್ರವೇಶಿಸಲು ಯಾರು ನಿನ್ನನ್ನು ಬಿಟ್ಟರು? ನನ್ನ ವಿಷಯ ನಿನಗೆ ಹೇಗೆ ತಿಳಿಯಿತು. ನನಗೆ ಆಜ್ಞಾಪಿಸಲು ನೀನು ಯಾರು? ಹೋಗು ಇಲ್ಲಿಂದ ನಡೆ" ಎಂದು ಹೂಂಕರಿಸಿದಳು.

ವೃದ್ಧಳು ಚಲಿಸಲಿಲ್ಲ. ಹಾಗೇ ದಿಮ್ಮನೆ ನಿಂತಿದ್ದು "ಹೋಗುವೆನು. ನಿನಗೊಂದು ಮಾತು ಹೇಳಲು ಬಂದೆ. ಸರಿಯಾಗಿ ಕೇಳಿಕೊ! ಈಗ ಈ ರಾಜ್ಯದಲ್ಲಿ ನಡೆಯುತ್ತಿರುವುದು ಮೂಢಾಚಾರ. ಯಾರುಯಾರೋ ಒಂದು ಹೆಸರು ಬರೆಯುವುದೆಂದರೇನು? ಆ ಹೆಸರುಗಳನ್ನು ಹದಿನಾರು ವರ್ಷ ಬಚ್ಚಿಡುವುದೆಂದರೇನು? ಅದರಿಂದ ಆಮೇಲೆ ಒಂದು ಹೆಸರು ಆರಿಸಿ ಕೊಳ್ಳುವುದೆಂದರೇನು? ಎಲ್ಲ ಅರ್ಥವಿಲ್ಲದ ಆಟ. ಯಾರಿಗೆ ತೋರಿದ ಹೆಸರು ಅವರು ಮುಚ್ಚಟೆಯಾಗಿ ಇಟ್ಟುಕೊಳ್ಳುವುದಕ್ಕೆ ಸ್ವಾತಂತ್ರ್ಯವಿಲ್ಲವೆಂದರೇನು? ಈ ದುರಾಚಾರ ಇಂದಿಗೇ ಮುಕ್ತಾಯವಾಗಬೇಕು. ಈಗ ಜನಿಸಿರುವ ಮಗುವಿಗೆ ಮಹಾರಾಣಿಯ ಜ್ಞಾಪಕಾರ್ಥವಾಗಿ 'ದೇವಸಿಂಹ' ನೆಂದು ನಾಮಕರಣಮಾಡುವಂತೆ ಮಹಾರಾಜನಿಗೆಹೇಳು. ಹೆಸರು ಉಳಿಸುವುದೇ ವಂಶ ಮರ್ಯಾದೆ" ಎಂದು ಹೇಳಿದಳು.



ದಾದಿ ಆವೇಶದಿಂದ "ಎಲೆ, ಶುಕುನಪಕ್ಷಿ, ಎಲ್ಲಿ ಗಂಟು ಬಿದ್ದೆಯೇ ನೀನು? ತಂದೆ ತಾಯಿಗಳು ಜೀವಿಸಿರುವಾಗ ಆ ಹೆಸರನ್ನು ಮಗುವಿಗೆ ಇಡಬಹುದೇ? ಎಂತಹ ಮಾತು ಬಂತು ಆ ನಿನ್ನ ಹೊಲಸು ಬಾಯಿಯಿಂದ! ಅಲ್ಲ, ವಂಶ ಪಾರಂಪರ್ಯವಾಗಿ ಬರುತ್ತಿರುವ ಆಚಾರವನ್ನು ಉಲ್ಲಂಘಿಸಬೇಕೇ! ಏನು ನಿನ್ನ ಹುಚ್ಚು ಪ್ರಲಾಪ? ಏನು ಈ ಅಪಶಕುನದ ಮಾತುಗಳು? ಇರು, ನಿನಗೆ ಕೊಡಿಸ್ತೇನೆ ಕೆಲಸ. ಏನೆಂದು ತಿಳಿದೆ! ಹಾಂ, ಮಹಾರಾಜರಿಗೆ ಹೇಳಿ ಬಿಟ್ಟು ಬರುವೆನು, ತಾಳು" ಎಂದು ದರ್ಬಾರಿನಕಡೆ ಹೋಗಲು ಸಿದ್ಧಳಾದಳು.

ಹೋಗಲು ಸಿದ್ಧವಾಗುತ್ತಿದ್ದ ದಾದಿಯನ್ನು ಕಂಡು ಆ ವೃದ್ಧಳು ಹಿಂದಕ್ಕೆ ಎಳೆದು "ತೊಂದರೆ ಪಡಬೇಡ. ನೀನು ರಾಜನೊಂದಿಗೆ ಹೇಳ

ಬೇಕಾದ ವಿಷಯ ಬೇರೊಂದೂ ಇದೆ. ಹೋಗಿ ಹೇಳುವೆಯಂತೆ" ಎಂದು ಅದೃಶ್ಯರೂಪವನ್ನು ತಾಳಿ ಕಿಟಕಿಯಿಂದ ಹಾರಿದಳು. ದಾದಿ ಭಯದಿಂದ ಕಿರಚುತ್ತಾ ಮಗುವನ್ನೆತ್ತಿಕೊಂಡು ದರ್ಬಾರಿನಕಡೆ ಓಡಿದಳು.

ಅಲ್ಲಿ ದರ್ಬಾರಿನಲ್ಲಿ ಏನು ನಡೆದಿದೆಯೆಂದರೆ 'ಏಕೆ ಇನ್ನೂ ರಾಣಿಯವರು ಬಂದಿಲ್ಲ. ಏನು ಸಮಾಚಾರ' ಎಂದು ಎಲ್ಲರೂ ಆಕೆಯ ಬರುವಿಕೆಗೆ ಎದುರು ನೋಡುತ್ತಿದ್ದಾರೆ. ಇಷ್ಟರಲ್ಲಿ ದಾದಿ ಪ್ರವೇಶಿಸಿದಳು. ದಾದಿ ಕಂಗೆಟ್ಟಿರುವುದನ್ನು ಕಂಡು ಮಂತ್ರಿಗಳೂ ಮಹೋತ್ಸವಕ್ಕೆ ಬಂದಿದ್ದ ಇತರ ರಾಜರೂ, ಲಕ್ಷಗಟ್ಟಳೆ ಜನರೂ ಸಂದಿಗ್ಧದಲ್ಲಿ ಸಿಲುಕಿದರು.

ಈ ರೀತಿ ಅವರೆಲ್ಲಾ ಕಾರಣತಿಳಿಯದೆಯೇ ಸಂದಿಗ್ಧ ಪರಿಸ್ಥಿತಿಯಲ್ಲಿರುವಾಗ ಕೋಟೆಯ ಗಂಟೆಗಳು ಶಬ್ದ ಕೇಳಿಸಿದವು. ಅವು ಮಾಮೂಲು ಗಂಟೆಗಳಲ್ಲ; ಮರಣಗಂಟೆಗಳು! ಎಲ್ಲರೂ ನಿಶ್ಚೇಷ್ಟಿತರಾದರು. ಶರೀರಗಳು ಕಂಪಿಸುತ್ತಿವೆ. ಮೈಮೇಲೆ ಪ್ರಜ್ಞೆಯಿಲ್ಲದೆ ಪ್ರತಿಯೊಬ್ಬರೂ ಆ ಗಂಟೆಗಳನ್ನು ಲೆಕ್ಕ ಮಾಡುತ್ತಿದ್ದರು.

ಅನಾಥ ರಾಜ್ಯದಲ್ಲಿ ಮತ್ತೊಂದು ಆಚಾರವಿತ್ತು. ರಾಜ ಕುಟುಂಬದಲ್ಲಿ ಯಾರು ಮರಣವಾದರೂ ಆ ತೀರಿಕೊಂಡ ವ್ಯಕ್ತಿಗೆ ಎಷ್ಟು ವಯಸ್ಸೋ ಅಷ್ಟುಬಾರಿ ಗಂಟೆ ಹೊಡೆಯುವದು. ಈಗ ಯಾರು ಮರಣಿಸಿದರೋ ಆ ಗಂಟೆಗಳು ನಿಲ್ಲುವವರೆವಿಗೂ ಯಾರಿಗೂ ತಿಳಿಯುವಂತಿಲ್ಲ. ಭಯದಿಂದ, ಭೀತಿಯಿಂದ ನಡುಗುತ್ತಾ ಪ್ರತಿಯೊಬ್ಬರೂ ಒಂದು........ ಎರಡು....ಮೂರು.... ಎಂದು ಗಂಟೆಗಳನ್ನು ಎಣಿಸುತ್ತಿದ್ದಾರೆ.

ಹಾಗೇ ಕ್ರಮವಾಗಿ ಮುವ್ವತ್ತೊಂಬತ್ತು ಗಂಟೆಗಳು ಹೊಡೆದು ನಿಂತುಬಿಟ್ಟಿತು. ಮುವ್ವತ್ತೊಂಬತ್ತು ವರ್ಷ ವಯಸ್ಸಿನ ವ್ಯಕ್ತಿ ರಾಜ ಕುಟುಂಬದಲ್ಲಿ ಯಾರಿದ್ದಾರೆ ಎಂದು ಪ್ರಜೆಗಳು ಗುಸಗುಸ ಚರ್ಚಿಸುತ್ತಿದ್ದರು. ಎಲ್ಲಿನ ಜನ ಅಲ್ಲೇ ಚಲ್ಲಾಪಿಲ್ಲಿಯಾಗಿ, ವರ್ತಮಾನ ತಿಳಿದುಕೊಳ್ಳುವ ಕುತೂಹಲದಿಂದ ಕೋಟೆಯ ಕಡೆ ಓಡಿದರು. ಈಗ ದರ್ಬಾರಿನಲ್ಲೇ ಅಲ್ಲ, ಕೋಟೆಯಲ್ಲೂ ಸಹ ಸಂತೋಷವೆಲ್ಲಾ ಕಲ್ಲೋಲವಾಗಿ ಬದಲಾಯಿಸಿತು.

(ಮುಂದುವರಿಯುತ್ತೆ)






ಮದರಾಸಿನಲ್ಲಿ ಒಂದು ದೊಡ್ಡ ಕಾರ್ಖಾನೆಯಿದೆ. ಆ ಕಾರ್ಖಾನೆಯಲ್ಲಿ ದಿನಾ ಕೆಲ ನೂರು ಜನ ಕೆಲಸ ಮಾಡುವರು. ಕಾರ್ಖಾನೆ ಯಜಮಾನ ಕೆಲಸಗಾರರಿಗೆ ಆಯಾದಿನದ ಸಂಬಳ ಆಯಾದಿನವೇ ಕೊಡುವ ಬದಲಾಗಿ ವಾರಕ್ಕೊಂದಾವರ್ತಿ ಕೊಡುವ ಏರ್ಪಾಟು ಮಾಡಿದ್ದ. ವಾರದ ಕೊನೆಯದಿನ ಹಣದ ಬಟವಾಡೆ ಏಳುಸಾವಿರಕ್ಕೂ ಮೀರಿತ್ತು.

ಯಜಮಾನ ಪ್ರತಿ ಶನಿವಾರ ಹತ್ತು ಗಂಟೆಗೆ ಅಷ್ಟು ಹಣಕ್ಕೆ ಒಂದು ಚೆಕ್ಕು ಬರೆದು, ಕದಿರವೇಲು ಎಂಬ ಗುಮಾಸ್ತನಿಗೆ ಆ ಚೆಕ್ಕು ಕೊಟ್ಟು, ಅದನ್ನು ಮುರಿಸಿ ಹಣ ತರಲು ಬ್ಯಾಂಕಿಗೆ ಕಳುಹಿಸುತ್ತಿದ್ದ. ಕದಿರವೇಲು ಒಂದು ತೊಗಲಿನ ಚೀಲವನ್ನು ಸೈಕಲ್ಲಿಗೆ ಸಿಕ್ಕಿಸಿಕೊಂಡು, ಚೆಕ್ಕು ಮುರಿಸಿ, ಹಣವನ್ನು ಆ ಚೀಲದಲ್ಲಿಟ್ಟುಕೊಂಡು, ಭದ್ರವಾಗಿ ತಂದು ಯಜಮಾನನಿಗೆ ಒಪ್ಪಿಸುತ್ತಿದ್ದ.

ಕದಿರವೇಲು ಆ ಕಾರ್ಖಾನೆಯಲ್ಲಿ ಗುಮಾಸ್ತೆಯಾಗಿ ಸೇರಿ ಹತ್ತುವರ್ಷಕ್ಕಿಂತಲೂ ಹೆಚ್ಚಾಗಿತ್ತು. ಆತನೆಂದರೆ ಯಜಮಾನನಿಗೆ ತುಂಬಾ ನಂಬಿಕೆ. ಆತನಿಗೆ ಈಗ ಎಂಬತ್ತು ರೂಪಾಯಿ ಸಂಬಳ.

ಒಂದು ಶನಿವಾರ ಯಥಾಪ್ರಕಾರ ಕದಿರವೇಲು ಚೆಕ್ಕು ಮುರಿಸಿ ಹಣ ತರುತ್ತಿರುವಾಗ ಆತನ ತಲೆಯಲ್ಲಿ ಒಂದು ವಿಚಿತ್ರವಾದ ಯೋಚನೆ ಪ್ರವೇಶಿಸಿತು. ಆ ಆಲೋಚನೆಗೆ ಕಾರಣವೇನೆಂದರೆ ಹಿಂದಿನ ರಾತ್ರಿ ಆತನು ಪತ್ರಿಕೆಯಲ್ಲಿ ಒಂದು ಸುದ್ದಿ ಓದಿದ್ದ. ಕಲ್ಕತ್ತೆಯಲ್ಲಿ ತನ್ನಂತೆಯೇ ಬ್ಯಾಂಕಿನಿಂದ ಹಣ ತರುತ್ತಿದ್ದ ಒಬ್ಬಾತನನ್ನು ದಾರಿಯಲ್ಲಿ ಇಬ್ಬರು ಮನುಷ್ಯರು ಅಟಕಾಯಿಸಿ, ಆ ಹಣದ ಚೀಲವನ್ನು ಕಿತ್ತುಕೊಂಡರೆಂತಲೂ, ಗುಮಾಸ್ತೆ ಅದನ್ನು ಕಿತ್ತುಕೊಳ್ಳಲು ಹೆಣಗಾಡಲು ಗುಂಡಿನಿಂದ ಹೊಡೆದು ಸಾಯಿಸಿ, ಹಣದೊಂದಿಗೆ ಪರಾರಿಯಾದರೆಂದೂ ಇತ್ತು.

‘ನನ್ನನ್ನೂ ಸಹ ದಾರಿಯಲ್ಲಿ ಯಾರೋ ಅಟಕಾಯಿಸಿ ದೋಚಿಕೊಂಡು ಹೋದರೆಂದು ನಾನೂ ಬೊಬ್ಬೆಯಿಟ್ಟರೆ ಏನಾಗುವುದು? ಎಲ್ಲರೂ ನಂಬುತ್ತಾರೆ. ಯಾಕೆಂದರೆ ಇಂತಹ ದರೋಡೆಗಳು ಈಗೀಗ ಎಲ್ಲೆಲ್ಲೂ ನಡೆಯು

ಪಿ. ಸೂರ್ಯನಾರಾಯಣ, ಮಾಂಬಲಂ





ತ್ತಿವೆ. ನಾನೆಂದರೆ ಎಲ್ಲರಿಗೂ, ಅದರಲ್ಲೂ ಯಜಮಾನರಿಗೆ ತುಂಬಾ ನಂಬಿಕೆ, ಅಭಿಮಾನ' ಎಂದು ಅವನಿಗೆ ಬುದ್ಧಿ ಹುಟ್ಟಿತು.

ಈ ಹಾಳು ಬುದ್ಧಿ ಹುಟ್ಟಿದಾಗಲಿಂದ ಕದಿರವೇಲುವಿಗೆ ಬೇರೆ ಆಲೋಚನೆಯೇ ಇಲ್ಲ. ಮುಂದಿನ ಶನಿವಾರ ಬಂತು. ಚೆಕ್ಕು ಮಾಮೂಲಿನಂತೆ ಕೈಗೆ ಬಂತು. ಬ್ಯಾಂಕಿಗೂ ಕಾರ್ಖಾನೆಗೂ ಮಧ್ಯದಾರಿಯಲ್ಲಿ ಸೆಂಟ್ರಲ್ ಸ್ಟೇಷನ್ ಸಿಕ್ಕುತ್ತಿತ್ತು. ಸೆಂಟ್ರಲ್ ಸ್ಟೇಷನ್ನಲ್ಲಿ ಪ್ರಯಾಣಿಕರು ಸಾಮಾನುಗಳನ್ನು ಇಟ್ಟು ಕೊಳ್ಳಲು ಪ್ರತ್ಯೇಕವಾದ ಕೊಠಡಿ ಇದೆ. ಪ್ರತಿ ಸಾಮಾನಿಗೆ ದಿನಕ್ಕೆ ಎರಡಾಣೆಯಂತೆ ಶುಲ್ಕ ಕೊಟ್ಟರೆ ರೈಲ್ವೇ ಅಧಿಕಾರಿಗಳು ಆ ಸಾಮಾನು ಗಳನ್ನು ಭದ್ರಪಡಿಸುವರು.

ಕದಿರವೇಲು ಚೆಕ್ಕು ಮುರಿಸಿದ. ನೋಟು ಗಳನ್ನು ತೆಗೆದುಕೊಂಡು ಬೇಗ ಬೇಗ ಸೈಕಲ್ ತುಳಿಯುತ್ತಾ, ಸೆಂಟ್ರಲ್ ಸ್ಟೇಷನ್ ಪಕ್ಕದಲ್ಲೇ ಇದ್ದ ಮೂರ್‌ಮಾರ್ಕೆಟ್‌ನೊಳಗೆ ನುಗ್ಗಿದ. ಅಲ್ಲಿ ಹಳೇ ಮಾಲುಗಳನ್ನು ಮಾರುವ ಒಂದು ಅಂಗಡಿಗೆ ಹೋಗಿ ಹಳೇ ಸೂಟುಕೇಸೊಂದು ಕೊಂಡು ಕೊಂಡು, ಅದರಲ್ಲಿ ನೋಟುಗಳನ್ನು ಇಟ್ಟ. ಒಂದು ಬೀಗವನ್ನೂ ಸಹ ತೆಗೆದು ಕೊಂಡು, ಆ ಪೆಟ್ಟಿಗೆಗೆ ಹಾಕಿ, ಸೆಂಟ್ರಲ್ ಸ್ಟೇಷನ್ನಲ್ಲಿದ್ದ ಸಾಮಾನಗಳ ಕೊಠಡಿಯ ಹತ್ತಿರ ಹೋದ. ಎರಡಾಣೆ ಸಲ್ಲಿಸಿ ಆ ಪೆಟ್ಟಿಗೆ ಯನ್ನು ಅಲ್ಲಿ ಒಪ್ಪಿಸಿದ. ಅಲ್ಲಿದ್ದ ಗುಮಾಸ್ತೆ ಕದಿರವೇಲು ಹೆಸರು ಬರೆದುಕೊಂಡು ರಸೀತಿ ಕೊಟ್ಟ. ಕದಿರವೇಲು ಹೊರಗೆ ಬಂದು, ತೊಗ ಲಿನ ಚೀಲದ ತುಂಬಾ ಕಲ್ಲುಗಳನ್ನು ತುರುಕಿ ತನಗೆ ದಾರಿಯಲ್ಲಿ ಸಿಕ್ಕುವ ಬಕ್ಕಿಂಗ್‌ಹ್ಯಾಮ್ ಕಾಲುವೆಯಲ್ಲಿ ಅದನ್ನು ಎಸೆದುಬಿಟ್ಟ. ಷರಟು, ಪಂಚೆಗಳನ್ನು ಹರಿದುಕೊಂಡ. ತಲೆ ಕೆದರಿ ಕೊಂಡ.

ಕಾರ್ಖಾನೆ ಸೇರಿ ಅಳುತ್ತಾ ಯಜಮಾನನ ಹತ್ತಿರ ಹೋಗಿ "ಸ್ವಾಮಿ, ಎಲ್ಲವೂ ಹಾಳಾಯ್ತು. ನಾಲ್ಕು ಜನ ಗೂಂಡಾಗಳು ನನ್ನನ್ನು ಅಡ್ಡಹಾಕಿ, ಬಲವಂತದಿಂದ ಹಣದ ಚೀಲ ಹಾರಿಸಿಕೊಂಡು ಹೋದರು" ಎಂದು ನಿಜವಾಗಿ ನಡೆದಂತೆ, ನಂಬಿಕೆ ಹುಟ್ಟುವಂತೆ ವರ್ಣಿಸಿದ.

ಯಜಮಾನ ನಿರ್ಘಾಂತನಾದ. "ಹಣ ಹೋದರೆ ಹೊಯ್ತು. ಆ ಧೂರ್ತರು ನಿನ್ನ

ಪ್ರಾಣ ಉಳಿಸಿದರಲ್ಲಾ, ಅಷ್ಟೇ ಸಾಕು" ಎಂದು ಕದಿರವೇಲುವನ್ನು ಸಮಾಧಾನ ಮಾಡಿ, ಕೂಡಲೇ ಪೋಲಿಸಿಗೆ ಟೆಲಿಫೋನ್ ಮಾಡಿದ.

ಮತ್ತೊಂದು ಗಂಟೆಗೆಲ್ಲಾ ಪೋಲೀಸ್ ಇನ್ಸ್ಪೆಕ್ಟರು ಬಂದು ಎಲ್ಲಾ ಪರೀಕ್ಷೆ ಮಾಡಿದ. ಕದಿರವೇಲು ತಡಕಾಡದೆ ಪ್ರತಿ ಪ್ರಶ್ನೆಗೂ ಸಹಜವಾಗಿ ಉತ್ತರ ಹೇಳಿದ.

ಇನ್ಸ್ಪೆಕ್ಟರು ಹಿಂದಿರುಗುವ ಮುನ್ನ ಯಜಮಾನನೊಂದಿಗೆ ರಹಸ್ಯವಾಗಿ "ಯಜಮಾನರೇ, ನಿಮ್ಮ ಗುಮಾಸ್ತೆ ಆಡುತ್ತಿರುವುದು ನಾಟಕವಲ್ಲವಷ್ಟೆ? ಅವನು ನಂಬಿಕಸ್ತನೇಯೇ?" ಎಂದು ಕೇಳಿದ.

ಅದಕ್ಕೆ ಯಜಮಾನ "ಅದೆಂತಹ ಮಾತು! ಕದಿರವೇಲು ತುಂಬಾ ಯೋಗ್ಯ. ನನಗೆ ಅವನು ಬಲಗೈ" ಎಂದ. "ಸರಿ, ಹಾಗಾದರೆ...." ಎಂದು ಇನ್ಸ್ಪೆಕ್ಟರು ಹೊರಟು ಹೋದ.

ಮಿಕ್ಕ ಗುಮಾಸ್ತರೆಲ್ಲಾ ಕದಿರವೇಲುವನ್ನು ಸಮಾಧಾನ ಪಡಿಸಿದರು. ಅವನ ಮನಸ್ಸು ನೆಮ್ಮದಿಯಾಗಿಲ್ಲವೆಂದು, ಯಜಮಾನ ಅವನನ್ನು ಆ ದಿನ ಎಲ್ಲರಿಗಿಂತಲೂ ಮೊದಲೇ ಮನೆಗೆ ಕಳಿಸಿಬಿಟ್ಟ.

ಕದಿರವೇಲು ಮನೆಗೆ ಹೋಗಿ ಆ ಹರಿದ ಅರಿವೆಗಳನ್ನು ಬದಲಾಯಿಸಿ ತರಾತುರಿಯಿಂದ ಸೆಂಟ್ರಲ್ ಸ್ಟೇಷನ್‌ಗೆ ಹೋದ.




ದಾರಿಯಲ್ಲಿ ಕದಿರವೇಲು ಈ ರೀತಿ ಯೋಚಿಸಿದ. "ಏಳು ಸಾವಿರಕ್ಕೂ ಮೀರಿದ ಹಣ. ಇದರಲ್ಲಿ ಒಂದು ರೂಪಾಯಿ ಸಹ ಮುಟ್ಟಕೂಡದು. ನಿಧಾನವಾಗಿ ಬಂಗಾರ ಕೊಂಡುಕೊಂಡು ಒಂದು ಕಡೆ ಹೂತಿಡುತ್ತೇನೆ. ಐದಾರು ವರುಷವಾದ ಮೇಲೆ, ಈ ವಿಷಯ ಎಲ್ಲರೂ ಮರೆತು ಬಿಡುತ್ತಾರೆ. ಆಗ ಯಾವುದೋ ಕಾರಣ ಹೇಳಿ ಈ ಕೆಲಸಬಿಟ್ಟು ಬೇರೊಂದು ಸ್ಥಳಕ್ಕೆ ಹೋಗಿ, ಯಾವುದಾದರೊಂದು ವ್ಯಾಪಾರ ಮಾಡಿ ಮುಂದಕ್ಕೆ ಬರುತ್ತೇನೆ. ಇಲ್ಲ ಈ ಹಣಕ್ಕೆ ಜಮೀನು ಕೊಂಡುಕೊಳ್ಳುತ್ತೇನೆ" ಎಂದು ಈ ರೀತಿ ಗಾಳಿ ಗೋಪುರ ಕಟ್ಟುತ್ತಾ ಸ್ಟೇಷನ್‌ಗೆ ನಡೆದ.

ಅಲ್ಲಿ ಗುಮಾಸ್ತೆಗೆ ರಸೀತಿ ಕೊಟ್ಟು "ನನ್ನ ಪೆಟ್ಟಿಗೆ ಕೊಡಿ ಸಾರ್" ಎಂದ.

ಆ ಗುಮಾಸ್ತೆ ಅದೊಂದು ರೀತಿ ನೋಡುತ್ತಾ "ಇದೇನು ನಿಮ್ಮ ಸೂಟ್‌ಕೇಸ್" ಎಂದ.

"ಹೌದು" ಎಂದು ಅದನ್ನು ಕದಿರವೇಲು ತೆಗೆದುಕೊಂಡು ಕಂಕುಳಲ್ಲಿಟ್ಟುಕೊಂಡು ಎರಡು ಹೆಜ್ಜೆ ಮುಂದಿಟ್ಟನೋ ಇಲ್ಲವೋ, ಯಾರೋ ಹಿಂದಿನಿಂದ ಅವನ ಭುಜ ಹಿಡಿದುಕೊಂಡಂತೆ ಆಯಿತು. ತಿರುಗಿ ನೋಡಿದರೆ ಪೋಲೀಸಿನವ.

"ಯಾಕಯ್ಯಾ, ನನ್ನನ್ನು ಹಿಡಿದುಕೊಂಡೆ" ಎಂದು ದಬಾವಣೆ ಮಾಡಿದ ಕದಿರವೇಲು.

"ಎಲ್ಲೀದು, ಈ ಸೂಟ್‌ಕೇಸ್" ಎಂದ ಪೋಲೀಸ್. "ಎಲ್ಲೀದೆನು ಬಂತು. ನನ್ನದೇ!" ಎಂದ ಕದಿರವೇಲು.

"ನನ್ನದೇ ಅಂದ್ರೆ ಆಗುತ್ಯೆ? ಇದು ಕಿಷೋರ್‌ಲಾಲ್ ಎಂಬ ವರ್ತಕನದು. ನೋಡು, ಈ ಮೂಲೆಯಲ್ಲಿ ಸಣ್ಣ ಅಕ್ಷರದಲ್ಲಿರುವ ಅವರ ಹೆಸರು. ಅವರು ರೈಲಿನಲ್ಲಿ ಪ್ರಯಾಣಮಾಡುತ್ತಿರುವಾಗ ಈ ಸೂಟ್‌ಕೇಸಿನೊಂದಿಗೆ ಮತ್ತೆ ಕೆಲವು ಸಾಮಾನುಗಳನ್ನು ಲಪಟಾಯಿಸಿದೆ, ಹೌದೋ,"....ಎಂದ ಪೋಲೀಸ್.

"ನನಗೆ ಕಿಷೋರ್‌ಲಾಲ್ ವಿಷಯ ತಿಳಿಯದು. ನಾನಿದನ್ನು ಮೂರ್ ಮಾರ್ಕೆಟ್ಟಿನಲ್ಲಿ ಕೊಂಡು ಕೊಂಡೆ" ಎಂದು ಗೋಗರದ.

ಆಗ ಪೋಲೀಸಿನವ "ಅವೆಲ್ಲಾ ಇನ್ಸ್‌ಪೆಕ್ಟರ ಮುಂದೆ ಹೇಳಿಕೊ.... ನಡಿ ಬೇಗ" ಎಂದು ಕದಿರವೇಲುವನ್ನು ಇನ್ಸ್‌ಪೆಕ್ಟರು ಹತ್ತಿರ ಎಳೆದುಕೊಂಡು ಹೋದ.

ಇನ್ಸ್‌ಪೆಕ್ಟರು ಕದಿರವೇಲುವನ್ನು ನೋಡಿದ ಕೂಡಲೇ ದಾರಿಯಲ್ಲಿ ಹಣ ದೋಚಿಕೊಂಡರೆಂದು ಹೇಳಿದ ಕಾರ್ಖಾನೆಯ ಗುಮಾಸ್ತೆ ಇವನೇ ಎಂದು ಗುರುತು ಹಿಡಿದ. ಸೂಟ್‌ಕೇಸಿನ ಬೀಗ ತೆಗೆಸಿ ನೋಡಿದರೆ ಕಳೆದು ಹೋದವೆಂದ ನೋಟಿನ ಕಟ್ಟುಗಳು ಅದರಲ್ಲಿ ಕಾಣಿಸಿತು. ಕದಿರವೇಲುಗೆ ನ್ಯಾಯಾಧಿಪತಿಗಳು ಏಳು ವರ್ಷ ಸಜ ವಿಧಿಸಿದರು.

ಎಷ್ಟೇ ಜಾಗರೂಕತೆಯಿಂದ ಮಾಡಿದೆವೆಂದರೂ ಸಹ ಕಳ್ಳತನ ಈ ರೀತಿಯಾಗಿ ಅನಿರೀಕ್ಷಿತವಾಗಿ ಬಯಲಾಗುವುದು.






ಒಂದೂರಿನಲ್ಲಿ ಲಂಕಪ್ಪ ಅಂತ ಒಬ್ಬನಿದ್ದ. ಅವನ ಮೊದಲನೇ ಹೆಂಡತಿಗೆ ಇಬ್ಬರು ಮಕ್ಕಳು. ರಾಮಯ್ಯ ಎಂಬ ಹುಡುಗ; ನಾಗಮ್ಮ ಎಂಬ ಹುಡುಗಿ. ಲಂಕಪ್ಪನ ಎರಡನೇ ಕುಟುಂಬ ದ್ಯಾವಕ್ಕನಿಗೆ ಸವತಿಯ ಮಕ್ಕಳೆಂದರೆ ಆಗದು. ಸಣ್ಣ ಹುಡುಗಿ ನಾಗಮ್ಮ ಏನೂ ಅರಿಯದ ಕಂದಮ್ಮ—ಮಲತಾಯಿ ಹಿಂಸೆ ಕೊಟ್ಟಾಗಲೆಲ್ಲಾ ಗೊಳೋ ಎಂದು ಅಳುವಳು. ಆದರೆ ಗಟ್ಟಿಮನಸ್ಸಿನ ರಾಮಯ್ಯ ಮಾತ್ರ "ನಾನಿರುವಾಗ ನಿನಗೇನು ಭಯ," ಎಂದು ತಂಗಿಯನ್ನು ಸಮಾಧಾನ ಮಾಡುವನು.

ಈ ಮಕ್ಕಳ ಪೀಡೆ ಬಿಡಿಸಿಕೊಂಡರೆ ಹಾಯಾಗಿ ಇರಬಹುದೆಂದು ದ್ಯಾವಕ್ಕ ಯಾವುದೋ ಒಂದು ಸಂಚು ಹೂಡುವಳು. ಪಾಪ, ಆ ಹಸುಳೆಗಳು ಆಕೆ ಕೊಟ್ಟ ಹಿಂಸೆಯನ್ನು ಸಹಿಸಿಕೊಂಡೇ ಇರುತ್ತಿದ್ದವು.

ಒಂದು ದಿನ ಆಕೆ ಅವರನ್ನು ಕುರಿತು "ಆ ಅಡವಿಯಲ್ಲಿ ನನಗೆ ಅತ್ಯಾವಶ್ಯಕವಾಗಿ ಬೇಕಾದ ಮೂಲಿಕೆಗಳಿವೆ. ಅವುಗಳನ್ನು ನೀವು ಹೇಗಾದರೂ ಇಂದು ತರಬೇಕು" ಎಂದು ಹೇಳಿ, ಒಬ್ಬಾಳನ್ನು ಜೊತೆಮಾಡಿ ಕಳುಹಿಸಿದಳು. ರಾಮಯ್ಯ ಧೈರ್ಯಶಾಲಿ ಮಾತ್ರವೇ ಅಲ್ಲ; ಯುಕ್ತಿಪರನೂ ಹೌದು. ಮಲತಾಯಿ ಕೊಡುತ್ತಿದ್ದ ಕಿರಿಕಿರಿಯನ್ನು ಅವನು ಸೂಕ್ಷ್ಮವಾಗಿ ಗ್ರಹಿಸುತ್ತಲೇ ಇದ್ದ. ಈಗ ತನ್ನನ್ನೂ, ನಾಗಮ್ಮನನ್ನೂ ಔಷಧಿಗಾಗಿ ಅಡವಿಗೆ ಕಳುಹಿಸುತ್ತಿರುವುದು ಒಂದು ಸಬೂಬೇ ಹೊರತು ಬೇರೆಯಲ್ಲ ಎಂದು ಅವನಿಗೆ ಗೊತ್ತಿತ್ತು. ಹೋಗುವಾಗ ಸಂಗಡ ಬರುತ್ತಿದ್ದ ಆಳಿಗೆ ತಿಳಿಯದಂತೆ ತನ್ನ ಹತ್ತಿರವಿದ್ದ ಬೆಣಚುಕಲ್ಲನ್ನು ದಾರಿಯುದ್ದಕ್ಕೂ ಹಾಕುತ್ತಾ ನಡೆದ.

ಒಂದು ಮಹಾರಣ್ಯವನ್ನು ಸೇರಿದ ಮಕ್ಕಳು ಆಯಾಸಗೊಂಡರು. ಜೊತೆಗೆ ಬಂದಿದ್ದ ಆಳು ಅವರನ್ನು ಕುರಿತು "ನೀವು ಈ ಮರದ ಕೆಳಗೆ ಕುಳಿತು ಆಯಾಸ ಪರಿಹರಿಸಿಕೊಳ್ಳಿ. ನಾನು ಹೋಗಿ ಮೂಲಿಕೆ ತರುತ್ತೇನೆ" ಎಂದು ಹೇಳಿ ಅವರಿಗೆ ತಿಳಿಯದಂತೆ ಮತ್ತೊಂದು ದಾರಿಯಲ್ಲಿ ಮನೆಗೆ ಹೊರಟು ಹೋದ.

ಮಕ್ಕಳಿಗೆ ಎಚ್ಚರವಾದಾಗ ಸಾಯಂಕಾಲವಾಗಿಬಿಟ್ಟಿತ್ತು. ಹಾ ಹಾ ಅನ್ನುವಷ್ಟರಲ್ಲಿ

ಬಿ. ವಿ. ರಮಣ, ಪುದುಚೇರಿ





ಬೆಳದಿಂಗಳೂ ಬಂದಿತು. ತಂಗಿಗೆ ಧೈರ್ಯ ಹೇಳಿ ರಾಮಯ್ಯ ಮನೆಕಡೆ ಹೊರಟ. ತಾನು ದಾರಿಯಲ್ಲಿ ಬೀಳಿಸುತ್ತಾ ಬಂದ ಬೆಣಚುಕಲ್ಲು ಬೆಳದಿಂಗಳಲ್ಲಿ ಥಳಥಳ ನೆಂದು ಹೊಳೆಯುತ್ತಿದ್ದುದರಿಂದ ದಾರಿ ಸ್ಪಷ್ಟ ವಾಗಿ ಕಾಣಿಸುತಿತ್ತು. ಅದರ ಸಹಾಯದಿಂದ ಸುಲಭವಾಗಿ ಅವರು ಆ ಅಡವಿಯನ್ನು ದಾಟಿ ಮನೆ ಸೇರಿಕೊಂಡರು.

ಇನ್ನೇನು ಇವರ ಕಾಟ ತಪ್ಪಿತೆಂದು ಸಂತೋಷದಿಂದ ಇದ್ದ ದ್ಯಾವಕ್ಕ ಇವರನ್ನು ನೋಡಿ ಉರಿದುಬಿದ್ದಳು. ಮಾರನೇ ದಿನವೇ ಅವರಿಗೆ ಅಷ್ಟು ಗಂಜಿ ಕೊಟ್ಟು, ಮೂರು ರೊಟ್ಟಿ ಮಾಡಿಕೊಟ್ಟು, ಒಬ್ಬಾತನನ್ನು ಜೊತೆ ಮಾಡಿ ಮತ್ತೊಂದು ಕಾಡಿಗೆ ಅಟ್ಟಿದಳು. ಈ ಬಾರಿ ಬೆಣಚುಕಲ್ಲು ತರಲು ರಾಮಯ್ಯನಿಗೆ ಪುರುಸತ್ತು ಇರಲಿಲ್ಲ. ಆದುದರಿಂದ ಮಲತಾಯಿ ಕೊಟ್ಟ ರೊಟ್ಟಿಯನ್ನು ಚೂರು ಚೂರು ಮಾಡಿ ದಾರಿಯುದ್ದಕ್ಕೂ ಹಾಕುತ್ತಾ ನಡೆದ.

ಈ ಸಾರಿಯೂ ಸಹ ಜೊತೆಗೆ ಬಂದಿದ್ದ ಆಸಾಮಿ ಅವರಿಬ್ಬರನ್ನೂ ಮೋಸಗೊಳಿಸಿ ಹೊರಟು ಹೋದ. 'ರೊಟ್ಟಿಯ ಚೂರನ್ನು ದಾರಿಯುದ್ದಕ್ಕೂ ಹಾಕಿದ್ದೇನೆ. ಕಷ್ಟವಿಲ್ಲದೆ ದಾರಿ ತಿಳಿಯುತ್ತೆ' ಎಂದುಕೊಂಡಿದ್ದ ರಾಮಯ್ಯ. ಆದರೆ ಮನೆಗೆ ಹೋಗೋಣ ವೆಂದು ಹೊರಟರೆ ತಾನು ಹಾಕಿದ ರೊಟ್ಟಿಯ ಚೂರು ಅಲ್ಲಿ ಒಂದಾದರೂ ಕಾಣಿಸಲಿಲ್ಲ. ತಿನ್ನುವ ಪದಾರ್ಥವಾದುದರಿಂದ ಪಕ್ಷಿಪ್ರಾಣಿಗಳು ಕಬಳಿಸಿದ್ದುವು.

ಹಾಗೇ ಹೋಗುತ್ತಿರುವಲ್ಲಿ ಅವರಿಗೆ ಮಿಣುಕು ಮಿಣುಕೆಂದು ಉರಿಯುತ್ತಿದ್ದ ಬೆಳಕು ಕಾಣಿಸಿತು. ಅದು ಯಾವುದೋ ಗ್ರಾಮವಿರಬೇಕೆಂದು ಅವರು ಅತ್ತಕಡೆ ಹೆಜ್ಜೆ ಹಾಕಿದರು. ಹತ್ತಿರಹೋಗಿ ನೋಡಿದರೆ ಅದು ಗ್ರಾಮವಿರದೆ ಗುಡಿಯಾಗಿತ್ತು. ಆ ಗುಡಿಯ ಗೋಪುರದ ಮೇಲೆಲ್ಲಾ ಜೀವಕಳೆಯಿಂದ ತುಂಬಿದಂತಹ ವಿವಿಧ ವಿಗ್ರಹಗಳಿದ್ದವು.

ರಾಮಯ್ಯ ಸುಮ್ಮನಿರಲಾರದೆ ಗುಡಿಯ ಹತ್ತಿರವಿದ್ದ ಮರವೊಂದರಿಂದ ಹಣ್ಣೊಂದನ್ನು ಕಿತ್ತು ತಿಂದ. ಕೂಡಲೇ ಗಣಗಣ ಎಂದು ಗಂಟೆಗಳು ಬಾರಿಸಿದುವು. ಗುಡಿಯ ಬಾಗಿಲು ತೆರೆದು ಕೊಂಡಿತು. ವೃದ್ಧಳೊಬ್ಬಳು ಒಳಗಿಂದ ಬಂದು "ಬನ್ನಿರೀ ಮಕ್ಕಳೇ, ನಿಮಗಾಗಿಯೇ ಎದುರು ನೋಡುತ್ತಿದ್ದೇನೆ" ಎಂದು ಅಮಿತ





ಆದರದಿಂದ ಅವರನ್ನು ಅಪ್ಪಿ, ಮುದ್ದಾಡಿ, ಒಳಗೆ ಕರೆದುಕೊಂಡು ಹೋದಳು. ಹೆತ್ತಮ್ಮನಿಗಿಂತಲೂ ಅತಿಶಯವಾಗಿ ಆದರಿಸಿದಳು. ಬಗೆಬಗೆಯ ಭಕ್ಷ್ಯಗಳಿಂದ ಊಟವಿಟ್ಟು, ಹಾಸಿಗೆ ಹಾಸಿ ಅವರನ್ನು ನಿದ್ದೆಮಾಡಿಸಿದಳು.

ರಾತ್ರಿ ಅವರು ಗಾಢನಿದ್ದೆಯಲ್ಲಿರುವಾಗ ರಾಮಯ್ಯನ ಮಂಚವನ್ನು ಬೇರೊಂದು ಕೊಠಡಿಗೆ ಬದಲಾಯಿಸಿ ಅವನನ್ನು ಬಂಧಿಸಿದಳು. ಆ ಮುದುಕಿ ಮಾರನೆಯ ದಿನದಿಂದ ನಾಗಮ್ಮನಿಗೆ ತುಂಬಾ ಕಿರುಕುಳ ಕೊಡುತ್ತಿದ್ದಳು. ಮಲತಾಯಿಯ ಹಿಂಸೆಗಿಂತಲೂ ವಿಪರೀತವಾಗಿತ್ತು ಈ ವೃದ್ಧಳ ಕಾಟ.

ಇಷ್ಟೊಂದು ನ್ಯೂನತೆಗಳಿದ್ದರೂ ಒಂದೇ ಒಂದು ಲಾಭವಿತ್ತು. ಯಾಕೋ ಏನೋ ರಾಮಯ್ಯನಿಗೆ ಮಾತ್ರ ಮುದುಕಿ ದಿನಾ ಪಂಚಭಕ್ಷ್ಯಪರಮಾನ್ನಗಳನ್ನು ಒದಗಿಸುವಳು. ಈ ಭಕ್ಷ್ಯಗಳನ್ನು ತಂಗಿ ನಾಗಮ್ಮನೇ ಅಣ್ಣನಿಗೆ ಕಿಟಕಿಯ ಮೂಲಕ ಕೊಡುತ್ತಿದ್ದಳು. ಆ ಸಮಯದಲ್ಲಿ ಅವರಿಬ್ಬರೂ ಒಬ್ಬರನ್ನೊಬ್ಬರು ಸಮಾಧಾನ ಪಡಿಸಿಕೊಳ್ಳುವರು.

ವೃದ್ಧಳು ದಿನಾ ರಾಮಯ್ಯನ ಕೋಣೆಯ ಹತ್ತಿರ ಬಂದು ಅವನ ಕ್ಷೇಮಸಮಾಚಾರವನ್ನು ತಿಳಿದುಕೊಂಡು "ಎಲ್ಲೀ ಮಗೂ ನಿನ್ನ ಕೈಕೊಡು ನೋಡೋಣ," ಎಂದು ಅವನ ಬೆರಳುಗಳನ್ನು ತಡವಿ ನೋಡುವಳು. ಯುಕ್ತಿಪರನಾದ ರಾಮಯ್ಯ ಒಂದು ಕಡ್ಡಿ ಕೈಗೆ ಕೊಡುವನು. "ಇನ್ನೂ ಬಲಿತಿಲ್ಲವೇ" ಎಂದು ಗೊಣಗಿಕೊಂಡು ಹೋಗುತ್ತಿದ್ದಳು ಆಕೆ.

ಒಂದು ದಿನ ಆಕೆ "ಬಲಿಯಲಿ ಬಿಡಲಿ, ನಾಳೆ ಕಬಳಿಸುವೆನು" ಎಂದು ಗೊಣಗಾಡಿಕೊಂಡಳು. ಆ ದಿನ ರಹಸ್ಯವಾಗಿ ಮೂಲೆಯಲ್ಲಿದ್ದ ಬ್ರಹ್ಮಾಂಡವಾದ ಒಲೆಯನ್ನು ಸರಿಮಾಡಿದಳು. ಆ ಒಲೆಯ ಕೆಳಗೆ ಮನುಷ್ಯನ ಶರೀರ ಹಿಡಿಸುವಷ್ಟು ಸ್ಥಳವಿದೆ. ಒಲೆಗೆ ಸರಿಹೋಗುವ ದೊಡ್ಡದೊಂದು ಹಂಡೆ ಇದೆ. ಈ ವಿಷಯಗಳನ್ನೆಲ್ಲಾ ನಾಗಮ್ಮ ಅಣ್ಣನೊಂದಿಗೆ ಹೇಳಲು, ರಾಮಯ್ಯ ವೃದ್ಧಳ ಇಂಗಿತವನ್ನು ತಿಳಿದುಕೊಂಡುಬಿಟ್ಟ.

ರಾತ್ರಿಯಾದ ಕೂಡಲೇ ವೃದ್ಧಳು ರಾಮಯ್ಯನ ಕೋಣೆಗೆ ಬಂದು "ಮಗೂ, ಇಂದು ದೇವಿಗೆ ನಿವೇದನೆ ಮಾಡಬೇಕು. ಸ್ವಲ್ಪ ಒಲೆ ಸರಿಮಾಡಿ ಕೊಡಪ್ಪಾ" ಎಂದು ಹೇಳಿ, ಎದುರಾಗಿ ಒಂದು ಮಣೆ ಹಾಕಿ



ಕುಳಿತುಕೊಳ್ಳುವಂತೆ ಹೇಳಿದಳು. ಅದಕ್ಕೆ ರಾಮಯ್ಯ "ಅಜ್ಜೀ ಅಜ್ಜೀ ನಮ್ಮ ಊರಿನಲ್ಲಿ ಇಂತಹ ಭಾರಿ ಒಲೆ, ಹಂಡೆ ಕಂಡರಿಯೆವು. ನೀನೊಂದು ಸಾರಿ ಸರಿಮಾಡಿ ತೋರಿಸು" ಎಂದ. ಮುದುಕಿ ಕೋಪದಿಂದ ಹೂಂಕರಿಸುತ್ತಾ "ಇಷ್ಟು ಮಾತ್ರ ತಿಳಿಯುದೇನೋ ಮಂಕು! ಇದೋ ಈ ರೀತಿ ಗಾಳಿ ಬೀಸಬೇಕು". ಎಂದು ಮಣೆಮೇಲೆ ಕುಳಿತು, ಬೆನ್ನು ಬಾಗಿಸಿ ಗಾಳಿ ಬೀಸಲು ಸಿದ್ಧಳಾದಳು. ಆಕೆ ಬಗ್ಗಿ ಬೀಸುತ್ತಿರುವಾಗ ರಾಮಯ್ಯ ಸಮಯ ನೋಡಿ, ಆಕೆಯನ್ನು ಒಳಗೆ ತಳ್ಳಿ, ಒಲೆಯ ಬಾಗಿಲುಗಳನ್ನು ದಢಾರನೆ ಮುಚ್ಚಿ, ಚಿಲುಕ ಹಾಕಿಬಿಟ್ಟ.

ಆಗ ಆ ಗುಡಿಯ ಗಂಟೆಗಳೆಲ್ಲಾ ಒಂದೇ ಸಾರಿ ಗಣಗಣನೆಂದು ಹೊಡೆದವು. ಆ ಕ್ಷಣವೇ ಗೋಪುರದ ಮೇಲಿದ್ದ ಬೊಂಬೆಗಳೆಲ್ಲಾ ಜೀವದಿಂದ ಕೆಳಗಿಳಿದು ಬಂದು ರಾಮಯ್ಯನಿಗೆ ನಮಸ್ಕಾರಮಾಡಿದವು. ಅವರೆಲ್ಲರೂ ಸೇರಿ ಮುದುಕಿ ಏನಾದಳೋ ನೋಡೋಣವೆಂದು ಒಲೆಯ ಹತ್ತಿರ ಹೋದರೆ, ಆ ಒಲೆ ಒಂದು ವಿಚಿತ್ರವಾದ ಪೆಟ್ಟಿಗೆಯಾಗಿ ಬದಲಾಯಿಸಿದೆ. ಅದರ ಮೇಲೆ "ಮಾಯಾರಾಕ್ಷಸಿಯನ್ನು ಕೊಂದ ಮಹನೀಯರೇ, ಈ ಪೆಟ್ಟಿಗೆಯ ಮೇಲೆ ಕುಳಿತುಕೊಳ್ಳಿ. ನಿಮ್ಮ ಕೋರಿಕೆಗಳನ್ನು ಹೇಳಿ" ಎಂದಿತ್ತು.

ಎಲ್ಲರೂ ಸಂತೋಷದಿಂದ ಜಯಕಾರ ಮಾಡುತ್ತಾ "ನೀವೇ ಮಹಾನುಭಾವರು. ಪೀಠವನ್ನು ಅಲಂಕರಿಸಿ" ಎಂದು ರಾಮಯ್ಯ, ನಾಗಮ್ಮನನ್ನು ಪೆಟ್ಟಿಗೆಯ ಮೇಲಿದ್ದ ಆಸನದಲ್ಲಿ ಕೂರಿಸಿದರು. ಮನೆಗೆ ಹೋಗಬೇಕೆಂದ ರಾಮಯ್ಯ. ಎಲ್ಲರೂ ನೋಡುತ್ತಿರುವಂತೆಯೇ ಆ ವಿಚಿತ್ರವಾದ ಪೆಟ್ಟಿಗೆ ವಿಮಾನದಂತೆ ಹಾರಿ ಹೋಯಿತು. ಮಕ್ಕಳಿಬ್ಬರೂ ಮನೆಗೆ ಹೋದ ಸಮಯಕ್ಕೆ ಸರಿಯಾಗಿ ಧೂರ್ತಳಾದ ಅವರ ಮಲತಾಯಿ ಯಾರಿಗೂ ತಿಳಿಯದಂತೆ ಮಾಯವಾಗಿ ಬಿಟ್ಟಿದ್ದಳು.

ಲಂಕಪ್ಪ ಈಗ ಮಕ್ಕಳನ್ನು ತಬ್ಬಿಕೊಂಡು ಮೈದಡವಿ ಮುದ್ದಾಡಿದ. ರಾಮಯ್ಯನ ಪ್ರತಿಭೆಗೆ ಎಲ್ಲರೂ ತಲೆದೂಗಿದರು. ಆ ವಿಚಿತ್ರವಾದ ಪೆಟ್ಟಿಗೆ ಕೇಳಿದುದನ್ನೆಲ್ಲಾ ಕೊಡುತ್ತಿದ್ದುದರಿಂದ ಲಂಕಪ್ಪನ ಸಂಸಾರ ಸಿರಿಸಂಪದಗಳೊಡನೆ ಸುಖವಾಗಿ ಬಾಳುತ್ತಿದ್ದರು.






ಒಂದು ಮಹಾರಣ್ಯದಲ್ಲಿ ದಂಪತಿಗಳಿಬ್ಬರು ಸೌದೆ ಒಡೆದು ಮಾರಿಕೊಂಡು ಜೀವನ ಪಥವನ್ನು ಸಾಗಿಸುತ್ತಿದ್ದರು. ಅವರಿಗೆ ಚಂದ್ರ ಎಂಬ ಸ್ಫುರದ್ರೂಪಿ ಕುವರಿಯಿದ್ದಳು. ಚಂದ್ರ ತುಂಬಾ ಜಾಣೆ. ಆ ಹುಡುಗಿಗೆ ಅಡವಿಯಲ್ಲಿರುವ ದೆವ್ವಗಳೂ ದೇವತೆಗಳೂ ಗೊತ್ತು. ಅವರು ಪ್ರಯೋಗಿಸುವ ಮಂತ್ರಗಳೂ, ಮಹಿಮೆಗಳೂ ಸಹಾ ತಿಳಿದಿತ್ತು.

ಚಂದ್ರಳ ಮನೆ ಪಕ್ಕದಲ್ಲೇ ಮಲ್ಲು ಎಂಬ ಹುಡುಗನಿದ್ದ. ಅವನು ಅವಳ ಸ್ನೇಹಿತ. ಚಂದ್ರ ಎಷ್ಟು ಒಳ್ಳೆಯವಳೋ ಅವನು ಅಷ್ಟು ಮಂದಮತಿ, ಸಾಹಸಿ, ದುಡುಕು ಸ್ವಭಾವದವನು. ಚಂದ್ರಳ ಎಂಟನೇ ಹುಟ್ಟಿದ ಹಬ್ಬ ಬಂತು. ಆಗ ಅವಳಿಗೆ ಒಂದು ವಿಚಿತ್ರವಾದ ಬೊಂಬೆಯನ್ನು ಬಹುಮಾನವಾಗಿ ಕೊಟ್ಟಳು ಅವಳ ತಾಯಿ. ಆ ಬೊಂಬೆಗೆ ಚಂದ್ರ ಶೃಂಗಾರ ಮಾಡಿದಳು. ಚಿನ್ನಾರಿಪಾಪ ಎಂದು ಹೆಸರಿಟ್ಟಳು.

ಚಿನ್ನಾರಿ ಪಾಪನನ್ನು ಕಂಕುಳಲ್ಲಿಟ್ಟುಕೊಂಡು ಒಂದು ದಿನ ಅವಳು ಅಡವಿಗೆ ಆಟವಾಡಲು ಹೋದಳು. ಅಷ್ಟರಲ್ಲಿ ಮಲ್ಲು ಆಯಾಸಪಡುತ್ತಾ ಎಲ್ಲಿಂದಲೋ ಓಡಿಬಂದ. "ಏನೋ ಮಲ್ಲು, ಏಕಷ್ಟು ಕಂಗೆಟ್ಟಿರುವೆ?" ಎಂದು ಕೇಳಿದಳು ಚಂದ್ರ ಅವನನ್ನು.

"ಏನಿಲ್ಲ, ಇದೋ ನೋಡು ಒಂದು ಕಮಾಕ್ಷಿ" ಎಂದು ಅಂಗಿಯೊಳಗೆ ಬಚ್ಚಿಟ್ಟುಕೊಂಡಿದ್ದ ಒಂದು ವಸ್ತುವನ್ನು ತೋರಿಸಿದ. ಅದೊಂದು ಚಿನ್ನದ ಪಾತ್ರೆ. ಆ ಪಾತ್ರೆ ತುಂಬಾ ಥಳಥಳನೆಂದು ಹೊಳೆಯುತ್ತಿದ್ದ ಮೊಹರುಗಳನ್ನು ನೋಡಿದ ಕೂಡಲೇ ಚಂದ್ರಳ ಕಣ್ಣುಗಳು ಕೋರೈಸಿದುವು.

"ಎಲಾ, ಇವನ ಮನೆ ಹಾಳಾಗ, ಇದೆಲ್ಲಿ ಸಿಕ್ಕಿತೋ ನಿನಗೆ. ಇದು ಗುಜ್ಜಾರಿಗಳು ಸಂಪಾದಿಸಿಕೊಂಡ ಚಿನ್ನದಪಾತ್ರೆ. ನೂರು ವರ್ಷ ಶ್ರಮಪಟ್ಟು ಅವರದನ್ನು ಸಂಪಾದಿಸಿದರು. ಅವರ ಮನಸ್ಸಿಗೆ ತುಸವಾದರೂ ನೋವುಂಟಾದರೆ, ಇದನ್ನು ಕಳುವು ಮಾಡಿದವರಿಗೆ ನಾನಾ ಕೊಂದರೆಗಳು ಒದಗುತ್ತವೆ. ಆದುದರಿಂದ

ಟಿ. ವಿನೋದ - ಕೆ. ಜಿ. ಎಫ್



ಅದೆಲ್ಲಿತ್ತೋ ಅಲ್ಲೇ ಇಟ್ಟುಬಿಟ್ಟು ಬಾ ಹೋಗು" ಎಂದು ಗದರಿಸಿಕೊಂಡಳು ಚಂದ್ರ.

"ಬಿಡೆ, ಬಿಡೇ, ಈ ಬೋಳಮ್ಮನ ಪುರಾಣಕ್ಕೇನು" ಎಂದು ನಿರ್ಲಕ್ಷ್ಯವಾಗಿ ನುಡಿದ ಮಲ್ಲು. ಅಷ್ಟರಲ್ಲಿ ಏನೋ ಸದ್ದು ಆದಂತೆ ಆಯಿತು. ಒಂದು ಕ್ಷಣದಲ್ಲಿ ಸಾವಿರಾರು ಜನ ಗುಜ್ಜರು ಅಲ್ಲಿ ಸಿದ್ಧರಾದರು. ಮಲ್ಲು ಕಾಲುಗಳಲ್ಲಿ ಶಕ್ತಿಯಿದ್ದಷ್ಟು ಜೋರಾಗಿ, ಹಿಂದಕ್ಕೆ ತಿರುಗಿಯೂ ಸಹ ನೋಡದೆ ಅಲ್ಲಿಂದ ಓಟ ಕಿತ್ತ.

ಅಲ್ಲಿ ನೆರೆದಿದ್ದ ಗುಜ್ಜರು ನೆಲದಿಂದ ಆರು ಅಂಗುಲ ಎತ್ತರವಿದ್ದಾರೆ. ಅವರಿಗೆ ಹತ್ತು ಅಂಗುಲದ ಉದ್ದದ ಗಡ್ಡಗಳಿವೆ. ಹಸಿರು ಉಡುಪು, ಮಿಠಾಯಿಪೊಟ್ಟಣಗಳಂತೆ ತ್ರಿಕೋಣಾಕಾರವುಳ್ಳ ಬಟ್ಟೆಯ ಟೋಪಿಗಳನ್ನು ಧರಿಸಿದ್ದಾರೆ. ಅವರು ಅಲ್ಲಿಗೆ ಬಂದು ಕಣ್ಣು ಮುಚ್ಚಿ ತೆಗೆಯುವಷ್ಟರೊಳಗಾಗಿ ಚಂದ್ರಳ ಕಂಕುಳಲ್ಲಿದ್ದ ಚಿನ್ನಾರಿ ಪಾಪನನ್ನು ಹಠಾತ್ತನೆ ಹಾರಿಸಿಕೊಂಡು ಹೊರಟುಬಿಟ್ಟರು.

ಪಾಪ, ಚಂದ್ರ ದಿಗ್ಮೂಢಳಾದಳು. ಆದರೂ ತುಸ ಹೊತ್ತಿಗೆಲ್ಲಾ ಚೇತರಿಸಿಕೊಂಡು, ಧೈರ್ಯ ವಹಿಸಿದಳು. ಆ ಗುಜ್ಜರು ವಾಸಿಸುತ್ತಿದ್ದ ಬಿಲ ಅವಳಿಗೆ ತಿಳಿದಿತ್ತು. ಆದುದರಿಂದ ಅಲ್ಲಿಗೆ ಹೋಗಿ ಅವರ ಮನ ಕರಗುವಂತೆ ಪ್ರಾರ್ಥಿಸಿ, ತನ್ನ ಚಿನ್ನಾರಿ ಪಾಪನನ್ನು ಪುನಃ ಪಡೆಯೋಣವೆಂದು ನಿಶ್ಚಯಿಸಿದಳು. ಅದೇ ಪ್ರಕಾರ ಹೊರಟು ಗುಜ್ಜರು ವಾಸಿಸುತ್ತಿದ್ದ ಸ್ಥಳ ಸೇರಿಕೊಂಡಳು. "ಎಲೈ, ಸಿದ್ಧರೇ, ನನ್ನ ಚಿನ್ನಾರಿ ಪಾಪನನ್ನು ನನಗೆ ಹಿಂದಿರುಗಿಸಿ ಕೊಟ್ಟು ಬಿಡಿಯಪ್ಪಾ" ಎಂದು ಪರಿಪರಿ ವಿಧದಲ್ಲಿ ಕೇಳಿಕೊಂಡಳು.

"ಓ, ಆ ಪಾಪ ಬೇಕೆ ನಿನಗೆ? ಮೊದಲು ನಮ್ಮ ಚಿನ್ನದಪಾತ್ರೆ ತಂದುಕೊಟ್ಟು ಬೇರೆ ಮಾತನಾಡು" ಎಂದು ಗದರಿಸಿ, ಎಲ್ಲರೂ ಒಟ್ಟಾಗಿ ಗಹಗಹಿಸಿ ನಕ್ಕರು.

ಆಗ ಚಂದ್ರಳ ದುಗುಡ ತೀವ್ರವಾಯಿತು. ಗುಜ್ಜರು ತನ್ನ ಬೊಂಬೆ ಹಾರಿಸಿಕೊಂಡು ಹೋದರಲ್ಲಾ ಎಂಬ ಚಿಂತೆ ಒಂದುಕಡೆ. ಮನೆಗೆ ಹಿಂತಿರುಗಿದಳೆಂದರೆ "ಮಗೂ

ನಿನ್ನ ಬೊಂಬೆ ಎಲ್ಲೀ ತಾಯಿ?" ಎಂದು ತಾಯಿ ಕೇಳಿದರೆ ಏನು ಹೇಳಲಿ ಎಂಬ ಕಳವಳ ಬೇರೊಂದು ಕಡೆ. ಆದ್ದರಿಂದ ಅವಳು ನೆಟ್ಟಗೆ ಮನೆಗೆ ಹೋಗಲಿಲ್ಲ. ಬೆಟ್ಟದಮೇಲೆ ಇರುವ ದನಕಾಯುವವನ ಹತ್ತಿರ ಹೋಗಿ ತನ್ನ ಸಂಕಷ್ಟತೋಡಿಕೊಂಡಳು. ಆ ಗುಜ್ಜರ, ಆ ಚಿನ್ನದಪಾತ್ರೆಯ ವಿಷಯ ಕುರಿತು ಚಂದ್ರಳಿಗೆ ಹೇಳಿದವನು ಆ ದನಕಾಯುವವನೇ!

"ಮಗೂ, ನಿನಗೆ ಒಂದು ಭಯವೂ ಇಲ್ಲ. ಇದೋ ಈ ಬೇರನ್ನು ನಿನ್ನ ಹತ್ತಿರ ಇಟ್ಟುಕೋ. ಅದು ನಿನ್ನ ಹತ್ತಿರ ಇದ್ದಪಕ್ಷಕ್ಕೆ ಗುಜ್ಜರು ನಿನ್ನನ್ನು ಏನೂ ಮಾಡಲಾರರು. ಇದನ್ನು ಸೋಕಿದರೆ ಅವರ ಮಂತ್ರತಂತ್ರಗಳು ಏನೂ ಕೆಲಸಮಾಡಲಾರವು" ಎಂದು ಹೇಳಿ ಒಂದು ಬೇರನ್ನು ಅವಳ ಕೈಗೆ ಕೊಟ್ಟ. ಮತ್ತೆ ಅವನು ಈ ರೀತಿ ನುಡಿದ "ಅವರಿಗೆ ತೊಂದರೆ ಕೊಟ್ಟರೆ ಅವರೇನಾದರೂ ಕೆಡಕು ಮಾಡುವರು. ಆದ್ದರಿಂದ ಅವರ ಚಿನ್ನದಪಾತ್ರೆಯನ್ನು ಅವರಿಗೆ ಒಪ್ಪಿಸಿಬಿಡುವಂತೆ ಮಲ್ಲನಿಗೆ ಬುದ್ಧಿ ಹೇಳು" ಎಂದ.

ಮನೆಗೆ ಹೊರಟಳು ಚಂದ್ರ. ದಾರಿಯಲ್ಲಿ ಆಕೆಗೆ ಸಿಡಿಲಿನಂತಹ ಒಂದು ವಿಷಯ ಕಿವಿಗೆ ಬಿತ್ತು. ತನ್ನ ಗೆಳೆಯ ಮಲ್ಲ ಗಾಡಿ ಕೆಳಗೆ ಬಿದ್ದನಂತೆ! 'ಅಯ್ಯೋ. ನಾನು ಎಣಿಸಿದಂತೆಯೇ ಆಯಿತಲ್ಲಾ, ದನಕಾಯುವವನು ಹೇಳಿದಂತೆ ನಡೆಯಿತು. ನಮ್ಮ ಮಲ್ಲನಿಗೆ ಆಗಲೇ ಗುಜ್ಜರ ಶಾಪ ತಗಲಿತು' ಎಂದು ಅವಳು ದುಃಖಗೊಂಡಳು.




ಈ ಪರಿಸ್ಥಿತಿಯಲ್ಲಿ ಚಂದ್ರಳಿಗೆ ಏನೂ ತೋರಲಿಲ್ಲ. ಅನಿರೀಕ್ಷಿತವಾಗಿ ಈ ಎರಡು ವಿಪತ್ತುಗಳು ಸಂಭವಿಸಿದೆ. ತನ್ನ ಪ್ರಾಣ ಸಮಾನವಾದ ಚಿನ್ನಾರಿಯನ್ನು ಗುಜ್ಜರು ಹಾರಿಸಿಕೊಂಡು ಹೋದುದು. ಅವರ ಶಾಪದಿಂದ ತನ್ನ ಸ್ನೇಹಿತನಾದ ಮಲ್ಲನಿಗೆ ಆಗಲೇ ಪೀಡೆಗಳು ಪ್ರಾರಂಭವಾದುದು. ಇವುಗಳಿಂದ ವಿಮೋಚನೆಯಾದರೂ ಹೇಗೆ ಎಂದು ಯೋಚಿಸುತ್ತಾ ಮನೆ ಸೇರಿದಳು.

ಆಗಲೇ ಮಲ್ಲನ ಮನೆಗೆ ಹೋಗಿ ಹಿಂತಿರುಗಿ ಬಂದಿದ್ದ ಚಂದ್ರಳ ತಂದೆ ತಾಯಿಗಳು "ಅಮ್ಮಾ, ಚಂದ್ರ, ನಮ್ಮ ಮಲ್ಲುಗೆ ವಿಪರೀತ



ಜ್ವರಬಂದಿದೆ. ಆ ಜ್ವರದಲ್ಲಿ 'ಮುಳ್ಳಿನ ಪೊದೆ....ಮುಳ್ಳಿನಪೊದೆ....ಚಂದ್ರಳಿಗೆ ಹೇಳಿ' ಎಂದು ಅವನು ಕನವರಿಸುತ್ತಿದ್ದಾನೆ. ಆ ಮುಳ್ಳಿಕಂಟಿ ವಿಷಯ ನಿನಗೇನಾದರೂ ತಿಳಿದಿದೆಯೇನಮ್ಮಾ ?" ಎಂದು ಕೇಳಿದರು.

ಅದಕ್ಕೆ ಚಂದ್ರ "ಯಾವ ಮುಳ್ಳಿನಪೊದೆ ಎಂದು ಹೇಳಿದನಮ್ಮಾ" ಎಂದು ಆತುರದಿಂದ ಕೇಳಿದಳು. ತಾಯಿಗೆ ತಿಳಿಯಲಿಲ್ಲ. "ಹಾಗಾದರೆ ನಾನೇ ಹೋಗಿ ತಿಳಿದುಕೊಂಡು ಬರುತ್ತೇನೆ" ಎಂದಳು ಚಂದ್ರ. ಆದರೆ ಚಂದ್ರಳನ್ನು ಹೋಗಗೊಡಲಿಲ್ಲ ಅವಳತಾಯಿ. ಚಂದ್ರಳ ಮನದಲ್ಲಿ ಆಂದೋಳನವುಂಟಾಯಿತು. ಆಗ ಸುಮ್ಮನಿದ್ದರೂ, ರಾತ್ರಿ ಎಲ್ಲರೂ ಮಲಗಿರುವ ಸಮಯ ನೋಡಿ, ಮೆಲ್ಲನೆ ಮಲ್ಲು ಮನೆಗೆ ಓಡಿದಳು.

ಚಂದ್ರ ಅಲ್ಲಿ ಹೋಗಿ ನೋಡಿದರೆ ಮಲ್ಲು ಸ್ಥಿತಿ 'ಈಗಲೋ ಆಗಲೋ' ಎನ್ನುವಂತಿತ್ತು. ಕಂಗೆಟ್ಟು ಚಂದ್ರ ಒಳಗೆ ಹೋಗಿ "ಯಾವ ಮುಳ್ಳಿನಪೊದೆ ಎಂದು ಕೇಳಿದನಮ್ಮಾ" ಎಂದು ಮಲ್ಲು ತಾಯಿಯನ್ನು ಕೇಳಿದಳು.

ಅದಕ್ಕೆ ಆಕೆ "ಯಾವುದೋ ಆಲದ ಮರದ ಕೆಳಗೆ ಇರುವುದಂತೆ" ಎಂದು ಸಂಕ್ಷಿಪ್ತವಾಗಿ ಹೇಳಿದಳು.

ಈ ಮಾತು ಕೇಳಿದ ಕೂಡಲೇ "ಸರಿ ಸರಿ, ತಮ್ಮನ ಕಾಹಿಲೆ ವಾಸಿಯಾಗಿಬಿಡುತ್ತೆ, ಭಯ ಪಡಬೇಡ" ಎಂದು ಆಕೆಗೆ ಧೈರ್ಯ ಹೇಳಿ, ಚಂದ್ರ ಆ ಮುಳ್ಳಿನಪೊದೆಯಿರುವ ಮರದ ಹತ್ತಿರಕ್ಕೆ ಹೋದಳು. ಅಲ್ಲಿ ಅವಳಿಗೆ ಬಂಗಾರದ ಪಾತ್ರೆ ಮುಳ್ಳಿನಪೊದೆಯೊಂದರಲ್ಲಿ ಕಾಣಿಸಿತು.

ಲಗುಬಗನೆ ಅದನ್ನು ಹಿಡಿದುಕೊಂಡು ಗುಜ್ಜರು ವಾಸಿಸುತ್ತಿದ್ದ ಬಿಲದ ಹತ್ತಿರಕ್ಕೆ ಓಡಿದಳು ಚಂದ್ರ. ಬಿಲದ ಹತ್ತಿರನಿಂತು "ಎಲೈ, ಗುಜ್ಜರಿರಾ" ಎಂದು ಕೂಗಿದಳು. ಸಾವಿರಾರು ಗುಜ್ಜರು ಸರಸರನೆ ಬಂದು ಆಕೆಯನ್ನು ಸುತ್ತುಗಟ್ಟಿದರು. "ಅಪ್ಪಾ, ಗುಜ್ಜರೇ, ಇದೋ ನಿಮ್ಮ ಚಿನ್ನದಪಾತ್ರೆ. ಇದನ್ನು ತೆಗೆದುಕೊಂಡು ನಮ್ಮ ಮಲ್ಲು ಹುಷಾರಾಗುವಂತೆ ಮಾಡೀಯಪ್ಪಾ, ಪುಣ್ಯಬರುತ್ತೆ" ಎಂದು ಅತಿ ದೈನ್ಯದಿಂದ ಬೇಡಿಕೊಂಡಳು.

ಅದನ್ನು ಕೇಳಿ ಅವರೆಲ್ಲರೂ ಏಕಕಂಠದಿಂದ ಗಹಗಹಿಸಿ ನಗುತ್ತಾ "ನೀನೇನು

ಕೋರಿದರೂ ಕೊಡುವೆವು. ಆದರೆ ಆ ಮಲ್ಲು ವಿಷಯ ಮಾತ್ರ ಎತ್ತಬೇಡ. ಅವನು ಕಳ್ಳ, ತುಂಟ. ಈ ಸಾರಿ ಅವನಿಗೆ ತಕ್ಕ ಶಾಸ್ತಿ ಮಾಡದೆ ಬಿಡುವುದಿಲ್ಲ" ಎಂದು ಹೇಳಿದರು ಕೋಪದಿಂದ. ಅದಕ್ಕೆ ಚಂದ್ರ "ನನಗೆ ಮಲ್ಲು ಆರೋಗ್ಯವಾಗಬೇಕು. ಅದು ಹೊರತು ನನಗೆ ನೀವೇನುಕೊಟ್ಟರೂ ಬೇಡ" ಎಂದು ಚಂಡಿ ಹಿಡಿದಳು.

ಆಗ ಗುಜ್ಜರು ಆಲೋಚನೆಗೊಳಗಾದರು. ಅವರವರಲ್ಲೇ ಚರ್ಚೆನಡೆಯಿತು. ಕೊನೆಗೆ ಅವರು ಚಂದ್ರಳ ಮನವಿಯನ್ನು ಮನ್ನಿಸಿ ಮಲ್ಲುವನ್ನು ಕಾಪಾಡಲು ನಿರ್ಧರಿಸಿದರು. ಅವರ ಮಂತ್ರ ಪ್ರಭಾವದಿಂದ ಚಂದ್ರಳಿಗೆ ತೂಕಡಿಕೆಬಂದು ನಿದ್ದೆ ಬಂದುಬಿಟ್ಟಿತು. ಆಕೆಗೆ ಎಚ್ಚರವಾದಾಗ ಅಲ್ಲಿ ಗುಜ್ಜರೂ ಕಾಣಲಿಲ್ಲ, ಚಿನ್ನದಪಾತ್ರೆಯೂ ಕಾಣಲಿಲ್ಲ.

ಆವೇಳೆಗಾಗಲೇ ನಸುಬೆಳಕಾಗಿದ್ದಿತು. ಚಂದ್ರಳಿಗೆ ಎಚ್ಚರವಾಗಿ ಕಣ್ಣು ತೆರೆದು ನೋಡಿದರೆ ದನಕಾಯುವನನ್ನು ಸಂಗಡ ಕರೆದುಕೊಂಡು ತನ್ನನ್ನು ಹುಡುಕುತ್ತಾ ಬಂದ ತನ್ನ ತಂದೆ ಎದುರಾಗಿ ನಿಂತಿದ್ದಾರೆ! ಅವರು ಚಂದ್ರಳನ್ನು ಎತ್ತಿ ಮುದ್ದಾಡಿ, ತನ್ನೊಂದಿಗೆ ಮನೆಗೆ ಬರುವಂತೆ ಕರೆದರು. ಆದರೆ ಅವರ ಮಾತು ಕೇಳಲಿಲ್ಲ ಅವಳು. ತಂದೆ ಕಾಣಿಸಿದ ಕೂಡಲೇ "ಅಪ್ಪಾ, ಅಪ್ಪಾ, ಮೊದಲು ಮಲ್ಲು ಹೇಗಿರುವನೋ ಹೇಳು" ಎಂದು ಕಾತರಳಾಗಿ ಕೇಳಿದಳು ಅವಳು.



"ಗುಣವಾಯಿತು, ತಾಯಿ. ಭಾರಿಭಾರಿ ವೈದ್ಯರು ಬಂದು ಚಿಕಿತ್ಸೆನಡೆಸಿದರು. ಒಂದೇ ದಿನದಲ್ಲಿ ವಾಸಿ ಆಯಿತು" ಎಂದರು ತಂದೆ. ಅದಕ್ಕೆ ಚಂದ್ರ "ಅಪ್ಪಾ ನಿನಗೆಲ್ಲೋ ಭ್ರಾಂತು. ಆ ಕಾಯಿಲೆ ಎಂದರೇನು, ವೈದ್ಯರು ಗುಣ ಪಡಿಸುವುದೆಂದರೇನು! ಗುಜ್ಜರ ಶಾಪದಿಂದ ಮಲ್ಲೂಗೆ ಅಷ್ಟೊಂದು ಕಷ್ಟ ಪ್ರಾಪ್ತವಾಯಿತು. ಅವರು ಈಗ ಆ ಶಾಪವನ್ನು ಹಿಂತೆಗೆದುಕೊಂಡರು ಅದರಿಂದಲೇ ಗುಣವಾಯಿತು. ಇದೆಲ್ಲವೂ ಅವರ ಮಹಿಮೆಯೇ ಹೊರತು ಮತ್ತೆ ಬೇರೆಯಲ್ಲ" ಎಂದು ಹೇಳಿದಳು.

ಈ ಮಾತುಗಳು ಆತನಿಗೆ ಅರ್ಥವಾಗಲಿಲ್ಲ. ಆದರೆ ಸಂಗಡ ಬಂದಿದ್ದ ದನಕಾಯುವವನು ಮಾತ್ರ ಗ್ರಹಿಸಿದ.

ತಂದೆ ಎಷ್ಟು ಕೇಳಿಕೊಂಡರೂ ಚಂದ್ರ

ಮನೆಗೆ ಹೋಗಲು ಒಪ್ಪಲಿಲ್ಲ. "ನಾನು ಆಮೇಲೆ ಬರುತ್ತೇನೆ, ನೀವು ಹೋಗಿ" ಎಂದಳು. ಆಗ ಅತನು ದನಕಾಯುವನೊಂದಿಗೆ "ಅಪ್ಪಾ, ನೀನಿದ್ದು ಚಂದ್ರಳನ್ನು ಕರೆದು ಕೊಂಡು ಬಾ" ಎಂದು ಮಗಳನ್ನು ಅವನ ಕೈಗೆ ಒಪ್ಪಿಸಿದನು. ತಂದೆ ಅತ್ತ ಹೋದ ಹೋದಕೂಡಲೇ ಅವಳು ಬಿಲದ ಹತ್ತಿರ ಹೋಗಿ ಗುಜ್ಜರನ್ನು ಕೂಗಿದಳು. ಅವರು ಸರ ಸರನೆ ಬಂದರು. "ಎಲೈ ಗುಜ್ಜರೇ, ಚಿನ್ನದ ಪಾತ್ರೆ ನಿಮಗೆ ತಂದುಕೊಟ್ಟೆ. ಆದರೂ ನನ್ನ ಮೇಲೇಕೆ ನಿಮಗಿನ್ನೂ ಕೋಪ? ನನ್ನ ಚಿನ್ನಾರಿ ಪಾಪನನ್ನು ನನಗೆ ಕೊಟ್ಟು ಬಿಡಿ. ಅದನ್ನು ಬಿಟ್ಟು ನಾನೊಂದು ಕ್ಷಣವೂ ಇರಲಾರೆ" ಎಂದು ವಿನಯದಿಂದ ಪ್ರಾರ್ಥಿಸಿದಳು.

ಅವಕ್ಕೆ ಅವರು "ಚಂದ್ರಾ ನಮ್ಮ ಪಾತ್ರೆ ನಮಗೆ ಹಿಂತಿರುಗಿಸಿ, ಮಾಡಿದ ತಪ್ಪನ್ನು ತಿದ್ದಿ ಕೊಂಡೆ. ಆ ರೀತಿ ತಪ್ಪನ್ನು ತಿದ್ದಿಕೊಂಡಿದ್ದ ರಿಂದಲೇ ಮಲ್ಲುಗೆ ಬೇನೆ ವಾಸಿ ಆಯಿತು. ಆದರೂ ನೀನಿಷ್ಟು ಬೇಡಿಕೊಳ್ಳುತ್ತಿರುವೆ ಯಾದುದರಿಂದ ಒಂದು ಕೆಲಸ ಮಾಡು. ನಾವೊಂದು ಹಾಡು ಹೇಳುತ್ತೇವೆ. ಅದನ್ನು ಗಬಗಬನೆ ಮೂವತ್ತು ಸಾರಿ ಹಾಡು. ಸರಿ ಯಾಗಿ ಹಾಡಿದರೆ ನಿನ್ನ ಮಗುವನ್ನು ನಿನಗೆ ಕೊಡುವೆವು" ಎಂದು ಹೇಳಿದರು. ಅದಕ್ಕೆ ಚಂದ್ರ ಸಂತೋಷದಿಂದ ಬೇಗ ಹೇಳುವಂತೆ ಅವಸರಪಡಿಸಿದಳು. ಅವರು ಈ ರೀತಿ ಹಾಡಿ ದರು.

ವಾಲಾ–ಊಲಾ–ಜಾಲಾ–ಬೂಲಾ!
ಊಷೀ–ಊಫೀ–ಊ....!
ಉಂಫಾ–ಪುಂಫಾ–ಡುಂಫಾ–ಮುಂಫಾ!
ವೂಫೀ–ವೂಫೀ–ವೂ....!!

ಈ ಹಾಡು ಹೇಳಲು ಚಂದ್ರ ತುಂಬಾ ಸಾರಿ ಪ್ರಯತ್ನ ಮಾಡಿದಳು. ಆದರೆ ಬಾಯಿ ತಿರುಗದು, ಪಾಪ.

"ಸರಿ, ನೀನು ಎಂದು ಹಾಡಬಲ್ಲೆಯೋ ಅಂದು ಬಾ" ಎಂದು ಗುಜ್ಜರು ಬಿಲವನ್ನು ಸೇರಿಕೊಂಡರು. ಈ ಹಾಡು ಬಂದಹೊರತು ತನ್ನ ಚಿನ್ನಾರಿ ಮಗು ಸಿಗುವಂತಿಲ್ಲವೆಂದು ಚಂದ್ರ ಈಗಲೂ ಆ ಹಾಡನ್ನು ಅಭ್ಯಾಸ ಮಾಡುತ್ತಲೇ ಇದ್ದಾಳೆ.






ಒಂದು ಪಟ್ಟಣದ ಸಮೀಪದಲ್ಲಿ ಒಂದು ದೊಡ್ಡ ಅರಳಿಮರವಿತ್ತು. ಆ ಮರದಲ್ಲಿ ಒಂದು ಪೊಟರೆಯಿತ್ತು. ಆ ಪೊಟರೆಯಲ್ಲಿ ಪಕ್ಷಿಯೊಂದು ಮೊಟ್ಟೆಯಿಟ್ಟು ಅವುಗಳನ್ನು ಮರಿ ಮಾಡಿತ್ತು. ಆದರೆ ಆ ಮರಿಗಳಿಗೆ ಇನ್ನೂ ರೆಕ್ಕೆಗಳು ಬಂದಿರಲಿಲ್ಲ. ತಾಯಿ ಹಕ್ಕಿ ಪ್ರತಿ ದಿನ ಅಡವಿಗೆ ಹೋಗಿ ಆಹಾರ ತಂದು ಮರಿಗಳಿಗೆ ಕೊಡುತಿತ್ತು.

ತಾಯಿ ಪಕ್ಷಿ ಗೂಡು ಬಿಟ್ಟು ಹೊರಗೆ ಹೋಗುವಾಗಲೆಲ್ಲಾ ಆ ಮರದ ಸಮೀಪದಲ್ಲಿ ನಿಶ್ಚಿಂತೆಯಿಂದ ನೆಗೆದಾಡುತ್ತಿದ್ದ ಒಂದು ಜಿಂಕೆ ಕಾಣಬರುತಿತ್ತು. ಆ ಜಿಂಕೆ ಮರಿ ಅಲ್ಲಲ್ಲಿ ಕಾಣಿಸಿದ ಹುಲ್ಲನ್ನು ತಿಂದು, ಹತ್ತಿರದಲ್ಲೇ ಇದ್ದ ಒಂದು ಕೊಳದಲ್ಲಿದ್ದ ನೀರಿನಿಂದ ಬಾಯಾರಿಕೆ ತೀರಿಸಿಕೊಂಡು, ಯಾರ ತಂಟೆಗೂ ಹೋಗದೆ ದಿನ ಕಳೆಯುತಿತ್ತು.

ಆ ಸಾಧು ಜಂತುವನ್ನು ಕಂಡಾಗಲೆಲ್ಲಾ ತಾಯಿ ಹಕ್ಕಿಗೆ ತುಂಬಾ ಮರುಕವುಂಟಾಗುತಿತ್ತು. ಏಕೆಂದರೆ ಅದು ತನ್ನ ಮರಿಗಳಿಗೆ ಆಹಾರಕ್ಕಾಗಿ ತಿರುಗಾಡುತ್ತಿರುವಾಗ, ಬೇಟೆಗಾರರು ಬಿಲ್ಲು ಬಾಣಗಳನ್ನು ಹಿಡಿದುಕೊಂಡು ಮೃಗಗಳಿಗಾಗಿ ಹುಡುಕಿಕೊಂಡು ಓಡಾಡುತ್ತಿರುವುದನ್ನು ಎಷ್ಟೋ ಸಾರಿ ನೋಡಿತ್ತು.

'ಈ ಕಿರಾತರಲ್ಲಿ ಯಾರೊಬ್ಬರ ಕಣ್ಣಿಗೆ ಬಿದ್ದರೂ ಈ ಜಿಂಕೆಯ ಪ್ರಾಣಮುಗಿದಂತೆಯೇ ಅಲ್ಲವೇ' ಎಂದು ಯೋಚಿಸುವುದು ಆ ಹಕ್ಕಿ.

ಒಂದು ದಿನ ಗೂಡು ಬಿಟ್ಟು ಇನ್ನೇನು ಹೊರಡುತ್ತಿರುವಾಗ ಎದುರಿಗೆ ಬಂದ ಆ ಜಿಂಕೆಯನ್ನು ನಿಲ್ಲಿಸಿ, "ಗೆಳೆಯಾ, ನಿನಗೆ ತಿಳಿದಿದೆಯೋ, ಇಲ್ಲವೋ, ಯಮಕಿಂಕರರಂತೆ ನನಗೆ ಎಲ್ಲಿ ನೋಡಿದರೂ ಬೇಟೆಗಾರರು ಕಾಣಿಸುತ್ತಿರುವರು. ನೀನು ಸ್ವಲ್ಪ ಜಾಗ್ರತೆಯಾಗಿರಬೇಕು. ಈ ರೀತಿ ನಿರ್ಭಯವಾಗಿ ಸಿಕ್ಕಿದಕಡೆ ಅಲೆದಾಡುವುದು ಅಪಾಯಕರ. ನರರಕಣ್ಣಿಗೆ ಕಾಣದೆ ಪೊದೆಗಳ ಮರೆಯಲ್ಲಿ ತಿರುಗಾಡಬೇಕು" ಎಂದು ಎಚ್ಚರಿಕೆ ಕೊಟ್ಟಿತು. ಜಿಂಕೆ ಕಿರುನಗೆ ಬೀರಿ "ಚಿಕ್ಕಮ್ಮಾ, ನನ್ನ ಮೇಲಿನ ಅಭಿಮಾನದಿಂದ ನೀನು ಹೇಳಿದ ಮಾತಿಗೆ ಪ್ರತಿ ಹೇಳಬಾರದು. ಆದರೆ ನಮ್ಮಂತಹ ಸಾಧುಪ್ರಾಣಿಗಳನ್ನು ಕಾಪಾಡಲು

ಸಿ. ಹೆಚ್. ದೀನದಯಾಳು - ಮಲ್ಲೇಶ್ವರಂ



ಆ ಭಗವಂತನಿದ್ದಾನೆ" ಎಂದಿತು. ಅದಕ್ಕೆ ಪಕ್ಷಿ "ಈ ವೇದಾಂತಕ್ಕೇನು ಬಿಡು. ಆದರೂ ಎಚ್ಚರಿಕೆಯಿಂದ ಇರು" ಎಂದುಹೇಳಿ ತನ್ನ ದಾರಿ ತಾನು ಹಿಡಿಯಿತು.

ಹಕ್ಕಿಗೂ ಜಿಂಕೆಗೂ ನಡೆದ ಸಂಭಾಷಣೆ ಯನ್ನು ಪಕ್ಕದ ಪೊದೆಯಲ್ಲಿ ಅವಿತಿಟ್ಟು ಕೊಂಡಿದ್ದ ಸರ್ಪವೊಂದು ಕೇಳುತಿತ್ತು. ಅತ್ತ ಹಕ್ಕಿ, ಇತ್ತ ಜಿಂಕೆ ಹೋದಕೂಡಲೇ ಹಾವು ಪಕಪಕನೆ ನಗಲು ಪ್ರಾಂಭಿಸಿತು.

ಚೇಳೊಂದು ಆ ನಗುವನ್ನು ಕೇಳಿ "ಏನಣ್ಣಾ, ಹಾಗೆ ಗಹಗಹಿಸಿ ನಗುತ್ತಿರುವೆ" ಎಂದು ಕೇಳಿತು. ಹಕ್ಕಿ ಮತ್ತು ಜಿಂಕೆ ಆಡಿಕೊಂಡ ಮಾತುಗಳನ್ನು ಹಾವು ಅದರೊಂದಿಗೆ ಹೇಳಿ "ನೋಡಿದೆಯಾ, ತಮ್ಮಾ, ತಾನೇನೋ ಮಹಾ ಜಾಗರೂಕತೆಯಿಂದ ಇರುವಂತೆ ಆ ಹಕ್ಕಿ ಜಿಂಕೆಗೆ ಬುದ್ಧಿ ಹೇಳಿತು. ಅದೇನು ಮಹಾ ಎಚ್ಚರಿಕೆ ವಹಿಸಿರೋದು. ಪಾಪ ಆ ನಾಲ್ಕು ಮರಿಗಳನ್ನು ಗೂಡಿನಲ್ಲಿ ಬಿಟ್ಟುಹೋಗಿದೆ" ಎಂದು ಮತ್ತೆ ನಗಲು ಪ್ರಾರಂಭಿಸಿತು.

ಆ ನಗುವಿನ ಅರ್ಥ ಚೇಳಿಗೆ ತಿಳಿಯ ದಾಯಿತು. "ಆ ಮರಿಗಳು ಎಲ್ಲಿಗೆ ಹೋಗು ತ್ತವೆ? ತಾಯಿ ಹಕ್ಕಿ ಬರುವವರೆವಿಗೂ ಬೆಚ್ಚಗೆ ಮರದ ಪೊಟ್ಟರೆಯಲ್ಲಿರುತ್ತವೆ" ಎಂದಿತು.

"ಅಷ್ಟೇಯೇ ನಿನ್ನ ಬುದ್ಧಿವಂತಿಕೆ. ಹಕ್ಕಿ ಬರುವವೇಳೆಗೆ ಅವರ ಮರಿಗಳು ನನ್ನ ಹೊಟ್ಟೆ ಯಲ್ಲಿರುತ್ತವೆ. ಗೊತ್ತೋ?" ಎಂದಿತು. ಚೇಳು ಅರ್ಥಗ್ರಹಿಸಿ "ಓಹೋ, ಅದೋ ನಿನ್ನ ಅಭಿ ಪ್ರಾಯ" ಎಂದು ಮುಂದೆ ಹೋಯಿತು.

ಆ ಚೇಳು ಸ್ವಲ್ಪ ದೂರ ಹೋಗಲು ಅದಕ್ಕೆ ಒಬ್ಬ ಬೇಟೆಗಾರನು ಎದುರಾದ. ಅವನು ಆ ಚೇಳನ್ನು ನೋಡಲಿಲ್ಲ. ಏಕೆಂದರೆ ಅವನ ದೃಷ್ಟಿಯೆಲ್ಲ ಆ ಅರಳಿ ಮರದ ಮೇಲೇ ಇತ್ತು. ಹಕ್ಕಿ ತನ್ನ ದಾರಿಯಲ್ಲಿ ತಾನು ಹೋಗಲು, ಜಿಂಕೆ ಕೊಳದಲ್ಲಿ ನೀರು ಕುಡಿದು ಅರಳಿಮರದ ಕೆಳಗೆ ಮಲಗಿಕೊಳ್ಳಲು ಹಿಂದಿರುಗಿ ಬರುತ್ತಿರು ವಾಗ ಅವನ ಕಣ್ಣಿಗೆ ಬಿದ್ದಿತು. ಕೂಡಲೇ ಅವನು ಬಾಣವನ್ನೊಂದು ತೆಗೆದು ಜಿಂಕೆಗೆ ಗುರಿ ನೋಡಿ ಬಿಟ್ಟ. ಈ ಗೊಂದಲದಲ್ಲಿ ಕೆಳಗೆ ಏನಿರುವುದೋ ಅವನು ನೋಡಿಕೊಳ್ಳದೆ ಚೇಳಿನ ಮೇಲೆ ಕಾಲಿಟ್ಟ. ಅದು ಅವನನ್ನು ಕಟಕ್ಕನೆ ಕಚ್ಚಿತು. "ಅಯ್ಯೋ, ಅಮ್ಮಾ," ಎಂದು ಅವನು ನೆಲದಮೇಲೆ ಕುಸಿದುಬಿದ್ದ.



ಬಾಣ ಮಾತ್ರ ರೊಯ್ಯನೆ ಬಂದು ಅರಳಿ ಮರಕ್ಕೆ ಚುಚ್ಚಿಕೊಂಡಿತು.

ಆಹಾರವನ್ನು ತೆಗೆದುಕೊಂಡು ಮರದ ಹತ್ತಿರಕ್ಕೆ ಪಕ್ಷಿ ಬರುವವೇಳೆಗೆ ಅರಳಿನ ರದಡಿ ನೆರಳಿನಲ್ಲಿ ಜಿಂಕೆ ಹಾಯಾಗಿ ಮಲಗಿ ಗೊರಕೆ ಹೊಡೆಯುತಿತ್ತು. "ಏನು ಗೆಳೆಯಾ, ಕ್ಷೇಮವೇ? ಇಂದು ನನಗೆ ಕಾಣಿಸಿದ ಬೇಟೆಗಾರರ ಗುಂಪನ್ನು ನೆನೆಸಿಕೊಂಡರೆ ಮೈ 'ಜುಂ' ಎನ್ನುತ್ತದೆ. ನಿನ್ನನ್ನು ಮತ್ತೆ ನೋಡುವೆನೋ ಇಲ್ಲವೋ ಎಂದು ಅನುಮಾನವುಂಟಾಗಿತ್ತು" ಎಂದಿತು ಹಕ್ಕಿ.

"ನಿಜ, ಚಿಕ್ಕಮ್ಮಾ ಈ ದಿನ ನೀನು ಹೇಳಿದಂತೆಯೇ ಆಯಿತು. ಬಾಣವೊಂದು ರಿವ್ವನೆ ಬಂದು ನನಗಿಂತ ತುಸ ಎತ್ತರ ಹೋಗಿ ಮರಕ್ಕೆ ಬಡಿದ ಶಬ್ದವಾಯಿತು."

ಮರಕ್ಕೆ ಹೋಗಿ ಬಡಿಯಿತು ಎಂದ ಕೂಡಲೇ ಹಕ್ಕಿಯ ಎದೆ ಡವಡವನೆಂದು ಬಡಿದುಕೊಂಡಿತು. ಗ್ರಹಚಾರ ಕಡಿಮೆಯಾಗಿ ಆ ಬಾಣ ಹೋಗಿ ನನ್ನ ಮರಿಗಳಿಗೆ ತಗಲಲಿಲ್ಲವಷ್ಟೇ? ಎಂದು ಪೊಟರೆಯ ಹತ್ತಿರ ಹೋಗಿ ನೋಡಿದರೆ ಕಾಣಿಸಿದ ದೃಶ್ಯವಾದರೂ ಏನು, ಗೊತ್ತೇ? ಪೊಟ್ಟರೆಗೆ ಒಂದು ಅಡಿ ಕೆಳಗೆ ಆ ಬಾಣ ಚುಚ್ಚಿಕೊಂಡಿದೆ. ಮತ್ತೆ ಸೂಕ್ಷ್ಮವಾಗಿ ಪರಿಶೀಲಿಸಿ ನೋಡಲು, ಮೊಳೆ ಹಾಕಿ ಹೊಡೆದಂತೆ ಬಾಣಕ್ಕೆ ಹೆಡೆ ಅಂಟಿಕೊಂಡು ಸತ್ತು ನೇತಾಡುತ್ತಿರುವ ಸರ್ಪ ಕಾಣಿಸಿತು. ಭಯದಿಂದ ಹಕ್ಕಿ ಕೂಗುತ್ತಾ "ಮಿತ್ರಾ, ಇಲ್ಲಿ ಬಾ" ಎಂದು ನೇತಾಡುತ್ತಿದ್ದ ಆ ಸರ್ಪವನ್ನು ತೋರಿಸಿತು.

ಆಗ ಜಿಂಕೆ "ಚಿಕ್ಕಮ್ಮಾ, ನನ್ನ ಮಾತುಗಳು ಪೊಳ್ಳುವೇದಾಂತವೆಂದು ಜರಿದುಬಿಟ್ಟೆ. ಆದರೆ ನಾನು ಹೇಳಿದ್ದು ಅಕ್ಷರಶಃ ಹೇಗೆ ನಿಜವಾಯಿತೋ ನೋಡು. ಸಾಧುಗಳನ್ನು ರಕ್ಷಿಸಲು ಸಂಸಿದ್ಧನಾದ ಆ ಭಗವಂತನೇ ನನ್ನನ್ನೂ ನಿನ್ನ ಮರಿಗಳನ್ನೂ ಕಾಪಾಡಿದ. ಭಗವಂತನು ನಮ್ಮನ್ನು ಎಷ್ಟು ವಿಚಿತ್ರ ರೀತಿಯಿಂದ ಕಾಪಾಡಿದನೋ ನೋಡು, ನನ್ನನ್ನು ಸಾಯಿಸಲು ಬಂದ ಬಾಣದಿಂದ, ನಿನ್ನ ಮರಿಗಳನ್ನು ಕಬಳಿಸುವ ಸಲುವಾಗಿ ಗೂಡಿಗೆ ಹರಿಯುತ್ತಿದ್ದ ಆ ಕ್ರೂರ ಸರ್ಪವನ್ನು ಸಂಹರಿಸಿದ" ಎಂದು ಆ ದೇವದೇವನ ಪರಿಪಾಲನೆಯನ್ನು ಕುರಿತು ಹೊಗಳಲಾರಂಭಿಸಿತು.




ಮುಕ್ತೇಶ್ವರದಲ್ಲಿ ಒಂದು ದೊಡ್ಡ ಕಲ್ಯಾಣಿ ಇದೆ. ಆ ಕಲ್ಯಾಣಿಯ ಸುತ್ತಲೂ ಕೆಲವು ಮನೆಗಳಾಗಿ ಅದೊಂದು ಅಗ್ರಹಾರವಾಗಿ ಬಿಟ್ಟಿತು. ಅದಕ್ಕೆ ಕಲ್ಯಾಣಿಅಗ್ರಹಾರ" ಎಂದು ಹೆಸರಾಯಿತು. ಆ ಅಗ್ರಹಾರ ಬ್ರಾಹ್ಮಣರಲ್ಲಿ ವೇದಪಾರಂಗತರು ಇರುವರು. ಅವರು ನಾಮಕರಣ ಮಹೋತ್ಸವ ಮೊದಲುಗೊಂಡು ವಿವಾಹ ಮಹೋತ್ಸವದವರೆವಿಗೂ ಎಲ್ಲ ಕಾರ್ಯಗಳನ್ನೂ ನಾನೂ, ನಾನೂ ಎಂದು ಪೈಪೋಟಿಯಿಂದ ಮಾಡಿಸುವರು. ಅವರ ಆದಾಯ ಪುಷ್ಕಳವಾಗಿರುತಿತ್ತು.

ಈ ಪುರೋಹಿತರೇ ಅಲ್ಲದೆ ಆ ಅಗ್ರಹಾರದಲ್ಲಿ ಇನ್ನೂರು ಜನರ ಬ್ರಾಹ್ಮಣಗಣವಿತ್ತು. ಆದರೆ ಇವರಿಗೆ ಮಂತ್ರ ಗಿಂತ್ರ ಬರುತ್ತಿರಲಿಲ್ಲ. ಹಾಗಾದರೆ ಇವರ ಕಸಬು ಏನು ಎಂದು ಕೇಳಬಹುದು ನೀವು. ಇವರೂ ಸಹ ಎಲ್ಲ ಕಾರ್ಯಗಳಿಗೂ ಹೋಗುತ್ತಾ ಬರುತ್ತಾ ಇರುತ್ತಾರೆ. ಎಲ್ಲ ಸಭೆಗಳಲ್ಲೂ ಹಾಜರಿರುತ್ತಾರೆ. ಪುರೋಹಿತರು ಮಂತ್ರಗಳನ್ನು ಹೇಳಿ ನಿಲ್ಲಿಸಿದಾಗಲೆಲ್ಲಾ, ಇವರು "ತಥಾಸ್ತು, ತಥಾಸ್ತು" ಎನ್ನುತ್ತಿರುತ್ತಾರೆ. ಇವರಿಗೆ ಬರುವುದೆಲ್ಲಾ ಇದೊಂದೇ ಮಾತು. ಈ ರೀತಿ ತಥಾಸ್ತು ಎಂದು ಹೇಳುವುದಕ್ಕೆ ಹೆಚ್ಚೆಂದರೆ ಹೊಟ್ಟೆ ತುಂಬಾ ಊಟ, ಅರ್ಧಾಣೆ ಮೀರದ ದಕ್ಷಿಣೆ ಸಿಗುವುದು. ಇವರನ್ನು ತಥಾಸ್ತು ಬ್ರಾಹ್ಮಣರೆಂದು ಕರೆಯುವರು. ಇವರು ಒಂದೊಂದು ದಿನ ಐದಾರು ಕಡೆ ಹೋಗಿ ಪ್ರತಿ ಕಾರ್ಯಕ್ಕೂ ಅರ್ಧಾಣೆಯಂತೆ ಸಂಪಾದಿಸುವರು. ಅಂದರೆ ದಿನಕ್ಕೆ ಒಟ್ಟು ಒಂದು ಮೂರಾಣೆ ಸಿಗುವುದೆಂದಾಯಿತು.

ತಥಾಸ್ತು ಗುಂಪಿನಲ್ಲಿ ಸೇರಿದವರು ಸುಬ್ಬಾವಧಾನಿಗಳು. ನಲವತ್ತು ವರ್ಷವಾದರೂ ಆದಾಯ ಇಂತಿಷ್ಟಾದರೂ ಹೆಚ್ಚಾಗದಿರಲು, ಅವರ ಹೆಂಡತಿ ಲಕ್ಷಮ್ಮ ಸುಮ್ಮನಿರಲಾರದೆ "ಏನೂಂದ್ರೆ, ನಿಮ್ಮ ಜೊತೆಯವರೆಲ್ಲಾ ದಿನಾ ಹತ್ತು ಹದಿನೈದು ರೂಪಾಯಿ ತರುತ್ತಾರೆ. ನೀವು ತಥಾಸ್ತು ತಥಾಸ್ತು ಅಂತ ಹೇಳಿ ಎಷ್ಟು ಅರ್ಧಾಣೆಗಳು ತೆಗೆದುಕೊಂಡು ಬಂದರೆ ನಮಗೆ ಹೊಟ್ಟೆ ತುಂಬುವುದು" ಎಂದು ಹೇಳುತ್ತಾ ಕಣ್ಣೀರು ಸುರಿಸಿದರು.

ಟಿ ವಿಶ್ವನಾಥ

ಎಷ್ಟೇ ಕೆಲಸಕ್ಕೆ ಬಾರದ ಮನುಷ್ಯನಾಗಲೀ, ಅವಧಾನಿಗೆ ಪೌರುಷ ಬಂತು. ಕೂಡಲೇ ದೂರದೇಶಕ್ಕೆ ಪ್ರಯಾಣ ಬೆಳೆಸಿದ. ಮಹಾ ಮಹಾ ಪಂಡಿತರನ್ನು ಆಶ್ರಯಿಸಿದ. ಆಯಾ ಕಾರ್ಯಗಳನ್ನು ಮಾಡಲು ಆಯಾ ಮಂತ್ರಗಳನ್ನು ಸೂಕ್ಷ್ಮವಾಗಿ ಕಲಿತುಕೊಂಡು ತನ್ನೂರಿಗೆ ಹಿಂತಿರುಗಿದ.

ಸುಬ್ಬಾವಧಾನಿಗಳು ಮಹಾವಿದ್ವಾಂಸನೆಂದೂ, ಘನಪಂಡಿತರ ಶ್ರೇಣಿಯಲ್ಲಿ ಸೇರಿಬಿಟ್ಟನೆಂದೂ, ಸುದ್ದಿ ಹರಡಿತು. ಭಾರಿ ಭಾರಿ ಪೌರೋಹತ್ಯಗಳಿಗೂ ಸಹ ಈಗ ಅವಧಾನಿಗಳಿಗೆ ಕರೆ ಬರುತಿತ್ತು. ಇದನ್ನು ಕಂಡು ಹಿಂದಿದ್ದ ಪುರೋಹಿತರಿಗೆ ಕಣ್ಣುಗಳು ಕೆಂಪಗಾದವು. "ಎಲಎಲಾ, ಎಷ್ಟು ದೊಡ್ಡ ಮನುಷ್ಯನಾಗಿಬಿಟ್ಟ ಈ ಅವಧಾನಿ" ಎಂದು ಅವರು ಅಸೂಯೆ ಪಡುತ್ತಿದ್ದರು.

ಒಂದು ಸಾರಿ ದೊಡ್ಡ ಮನುಷ್ಯರೊಬ್ಬರು ಮನೆಯಲ್ಲಿ ಮದುವೆ ಮಾಡಿಸುತ್ತಿದ್ದಾರೆ. ಅವಧಾನಿಗಳು ಮಂತ್ರಹೇಳಿ ಸಮಸ್ತ ದೇವತೆಗಳನ್ನೂ ಆಹ್ವಾನಿಸಿದ್ದಾರೆ. ಮಂತ್ರ ಪೂರ್ತಿಯಾದಕೂಡಲೇ ಹಿಂದಿನ ಅಭ್ಯಾಸ ಬಲದಂತೆ 'ತಥಾಸ್ತು' ಎಂದುಬಿಟ್ಟರು. ಪುರೋಹಿತರೆಲ್ಲರೂ ಯಾವಾಗ ಸಮಯ ಸಿಗುವುದೋ, ಯಾವಾಗ ಇವನಿಗೆ ಶಾಸ್ತಿ ಮಾಡೋಣವೋ ಎಂದು ಕಾದಿದ್ದರು. ಈಗ ಅವರು ಅವಧಾನಿಗಳ ತಪ್ಪು ಕಂಡುಹಿಡಿದು "ತಥಾಸ್ತು ಎಂದು ಹೇಳುವುದನ್ನು ಬಿಟ್ಟು, ಇವನಿಗೇನೂ ಬರುವುದಿಲ್ಲ, ಎಲ್ಲಾ ಅಪಶಬ್ದಗಳನ್ನು ನುಡಿಯುತ್ತಿದ್ದಾನೆ ಎಂದು ಯಜಮಾನನಿಗೆ ಹೇಳಿ, ಅವನನ್ನು ಹೊರಗೆ ಅಟ್ಟುವಂತೆ ಮಾಡಿದರು.

ಅವಧಾನಿಗಳು ಮನೆಗೆ ಹೋದಕೂಡಲೇ ಲಕ್ಷಮ್ಮನಿಗೆ ಈ ವಿಷಯ ತಿಳಿದು "ಎಷ್ಟು ಓದಿದರೇನು ಲಾಭ? ನಾಯಿಯ ಡೊಂಕು ಬಾಲವನ್ನು ನೆಟ್ಟಗೆ ಮಾಡಬಲ್ಲವರು ಯಾರು? ನಡೆಯಿರಿ ನಡೆಯಿರಿ ಮತ್ತೆ ಚೊಂಬೂ ನೀವೂ ಸಿದ್ಧರಾಗಿ 'ತಥಾಸ್ತು' ಅನ್ನುತ್ತಾ ಕುಳಿತುಕೊಳ್ಳಿ" ಎಂದು ಬೇಸರಗೊಂಡು, ಮನದಲ್ಲಿದ್ದ ಆವೇದನೆಯನ್ನು ವ್ಯಕ್ತಪಡಿಸಿದರು.

ಅಂದಿನಿಂದ ಸುಬ್ಬಾವಧಾನಿಗಳು ಮತ್ತೆ ತಥಾಸ್ತು ಬ್ರಾಹ್ಮಣರಾಗಿಯೇ ಇದ್ದುಬಿಟ್ಟರು.





# ಸೋಮಾರಿಯ ಗತಿ

ನೇಪಾಳದೇಶವಲ್ಲಿ ಹಿಂದೆ ಷೇರ್ ಷೀರ್ ಜಂಗ್ ರಾಣಾ ಎಂಬ ಒಬ್ಬ ಭಾರಿ ಜಮೀನುದಾರನಿದ್ದನು. ಆತನಿಗೆ ಸೇರಿದ ನೆಲದಲ್ಲಿ ಒಂದು ತೊರೆ ಪ್ರವಹಿಸುತಿತ್ತು. ಆ ನದಿಯಿಂದ ಅನೇಕ ಸ್ಫಟಿಕದ ಲಿಂಗಗಳು ದಡಕ್ಕೆ ಹೊಡೆದುಕೊಂಡು ಬರುತ್ತಿದ್ದವು. ನುಣುಪಾಗಿ, ಅಂದವಾಗಿರುವ ಲಿಂಗಗಳೆಲ್ಲವನ್ನೂ ಆತನು ಆರಿಸಿ ಭದ್ರಪಡಿಸುತ್ತಿದ್ದನು.

ಶಿವಭಕ್ತರಿಗೆ ಈ ಲಿಂಗಗಳೆಂದರೆ ತುಂಬಾ ಪ್ರೀತಿ. ದೇಶದೇಶಗಳಲ್ಲಿರುವ ಶಿವಭಕ್ತರು ಆತನ ಹತ್ತಿರಹೋಗಿ ಆಶ್ರಯಪಡೆದು ಒಂದೊಂದು ಲಿಂಗವನ್ನು ತೆಗೆದುಕೊಂಡು ಹೋಗಿ ದೇವತಾರ್ಚನೆ ಪೆಟ್ಟಿಗೆಯಲ್ಲಿಟ್ಟು ಪೂಜೆ ಮಾಡಿಕೊಳುತ್ತಿದ್ದರು. ಆತನು ಶೇಖರಿಸಿದ್ದ ಒಳ್ಳೆ ಲಿಂಗಗಳೆಲ್ಲವೂ ಈ ರೀತಿಯಾಗಿ ಖರ್ಚಾಗಿ ಒಂದೇ ಒಂದು ಮಾತ್ರ ಉಳಿದಿತ್ತು ಒಂದು ದಿನ ಬಸವೇಶ್ವರನೆಂಬ ಶಿವಭಕ್ತನೊಬ್ಬನು ದಕ್ಷಿಣ ದೇಶದಿಂದ ರಾಣಾ ಮನೆಗೆ ಬಂದನು. ರಾಣಾ ಮಾಡಿದ ಅತಿಥಿಸತ್ಕಾರವನ್ನು ಸ್ವೀಕರಿಸಿ, ರಾಣಾಗೆ ಮೆಲ್ಲನೆ ತಾನು ಬಂದ ಕಾರ್ಯವನ್ನು ತಿಳಿಸಿದ. ಮತ್ತೆ ಯಾವ ಕಾರ್ಯವಿರುತ್ತೆ! ಲಿಂಗಕ್ಕಾಗಿಯೇ ಆತ ಬಂದಿದ್ದ. ರಾಣಾ ತನ್ನ ಹತ್ತಿರವಿದ್ದ ಆ ಒಂದು ಲಿಂಗವನ್ನೂ ಸಹ ಭಕ್ತಿಪೂರ್ವಕವಾಗಿ ಬಸವೇಶ್ವರನಿಗೆ ಒಪ್ಪಿಸಿದ.

ಇರುವುದು ಇದು ಒಂದೇ ಎಂದು ಕೊಡಲು ನಿರಾಕರಿಸಿದೆ ರಾಣಾ ತನಗೆ ಲಿಂಗವನ್ನು ಕೊಡಲು ಬಸವೇಶ್ವರನಿಗೆ ತುಂಬಾ ಸಂತೋಷವಾಯಿತು. ಆತನು ಹೋಗುವ ಮುನ್ನ ತನ್ನ ಜೋಳಿಗೆಯಿಂದ ಒಂದು ಹಿತ್ತಾಳೆ ಪೆಟ್ಟಿಗೆಯನ್ನು ತೆಗೆದು ರಾಣಾ ಕೈಯಲ್ಲಿಟ್ಟು "ಷೇರ್ ಷೀರ್ ಜಂಗ್, ಈ ಪೆಟ್ಟಿಗೆಯಲ್ಲಿ ಒಂದು ಭೂತವಿದೆ. ನಿನಗೇನು ಕೆಲಸ ಬೇಕಾದರೂ ಅದು ಮಾಡತ್ತದೆ. ಬೇಕೆಂದಾಗ ಭೂತವನ್ನು ಪೆಟ್ಟಿಗೆಯಿಂದ ಹೊರಗೆ ಬರಮಾಡಿಕೊಂಡು ಕೆಲಸ ಮಾಡಿಸಿಕೊ" ಎಂದು ಹೇಳಿ ಹೊರಟು ಹೋದ.

ಆ ಪೆಟ್ಟಿಗೆಯ ಮಹಿಮೆಯನ್ನು ನೋಡಬೇಕೆಂದು ರಾಣಾ ಮರುದಿನವೇ ಅದನ್ನು ಒಂದು ಬೆಂಚಿನ ಮೇಲಿಟ್ಟು "ಎಲೈ ಭೂತವೇ,

ಪಿ. ವಿ. ರಾಮಚಂದ್ರಮೂರ್ತಿ



ನನಗೆ ಸ್ನಾನಕ್ಕೆ ಸಿದ್ಧಮಾಡು" ಎಂದ. ಕೂಡಲೇ ಪೆಟ್ಟಿಗೆಯ ಮುಚ್ಚಳವನ್ನು ತೆಗೆದು ಕೊಂಡು, ಆರು ಅಂಗಲದ ಗಿಡ್ಡನೊಬ್ಬ ಹೊರಗೆ ಬಂದ. ನೋಡು ನೋಡುತ್ತಿದ್ದಂತೆಯೇ ಆರು ಅಡಿ ಉದ್ದ ಬೆಳೆದು ಲಗುಬಗನೆ ಸ್ನಾನಗೃಹಕ್ಕೆ ಹೋಗಿ ಬೆಂಕಿಮಾಡಿ, ನೀರು ಕಾಯಿಸಿ, ಸ್ನಾನಕ್ಕೆ ಸಿದ್ಧಮಾಡಿದ. ಇದೆಲ್ಲಾ ಒಂದು ಕ್ಷಣದಲ್ಲಿ ನಡೆದು ಹೋಯಿತು.

ರಾಣಸಿಗೆ ಈ ಪದ್ಧತಿ ಸರಿಕಂಡು ಬಂತು. ಆತನು ಪ್ರತಿಯೊಂದು ಕೆಲಸವನ್ನೂ ಭೂತದ ಸಹಾಯದಿಂದಲೇ ಮಾಡಿಸಿಕೊಳ್ಳುವುದನ್ನು ಪ್ರಾರಂಭಿಸಿದ. ಮನೆಕೆಲಸ, ಅಡಿಗೆಕೆಲಸ, ಅಂಗಡಿಕೆಲಸ, ಅಗಸನಕೆಲಸ, ಒಂದೇನು, ಎರಡೇನು ಸಮಸ್ತ ಚಾಕರಿಯನ್ನು ಆ ಭೂತವೇ ಮಾಡುತ್ತಿದ್ದುದರಿಂದ ಅಷ್ಟರವರೆ ವಿಗೂ ಆ ಕೆಲಸಗಳನ್ನೆಲ್ಲಾ ನೋಡಿಕೊಳ್ಳುತ್ತಿದ್ದ ನೌಕರರಿಗೆ ಒಂದೇ ಸಾರಿ ಕೆಲಸವಿಲ್ಲದೆ ಹೋಯಿತು.

"ನೀವೆಲ್ಲಾ ಬೇರೇ ಜಾಗದಲ್ಲಿ ಕೆಲಸ ನೋಡಿಕೊಳ್ಳಿ" ಎಂದು ರಾಣಾ ಅವರೊಂದಿಗೆ ಹೇಳಲು, ಅವರೆಲ್ಲಾ ಆತನ ಕಾಲುಗಳಮೇಲೆ ಬಿದ್ದು "ಸ್ವಾಮಿ, ನಮ್ಮನ್ನು ಕಳುಹಿಸಬೇಡಿ. ಮೊದಲಿಗಿಂತಲೂ ಹೆಚ್ಚು ಭಯ, ಭಕ್ತಿಗಳಿಂದ ಇನ್ನುಮುಂದೆ ಕೆಲಸ ಮಾಡುವೆವು. ನಮಗೆ ಅಶಕ್ಯವಾದ ಕೆಲಸ ಬೇಕಾದರೆ ಈ ಭೂತದಿಂದ ಮಾಡಿಸಿಕೊಳ್ಳುವಿರಂತೆ" ಎಂದು ಪ್ರಾರ್ಥಿಸಿ ಕೊಂಡರು.

ಆಗ ರಾಣಾಗೆ ಅವರ ಮೇಲೆ ಮರುಕ ವುಂಟಾಯಿತು. 'ಪಾಪ, ಇಷ್ಟೊಂದು ಜನ ಚಾಕರಿಯಿಲ್ಲದೆ ಒದ್ದಾಡುವರಲ್ಲಾ' ಎಂದು ಕೊಂಡು, ಆ ಭೂತವಿದ್ದ ಪೆಟ್ಟಿಗೆಯನ್ನು ಅಟ್ಟದಮೇಲಿಟ್ಟು, ಹಳೇ ನೌಕರರ ಕೈಯಲ್ಲೇ ತನ್ನ ಕೆಲಸಗಳನ್ನು ಮಾಡಿಸಿಕೊಳ್ಳುತ್ತಿದ್ದ.

ಈ ನೌಕರರಲ್ಲಿ ರಹಿಮಾನನೆಂಬ ಒಬ್ಬ ಮಾಲಿ ಇದ್ದ. ಅವನು ತುಂಬಾ ಸೋಮಾರಿ. ಯಜಮಾನ ಯಾವ ಕೆಲಸವನ್ನು ಹೇಳಿದರೂ ತಾನು ಮಾಡದೆ ಮತ್ತೊಬ್ಬರ ಕೈಯಲ್ಲಿ ಮಾಡಿಸುತ್ತಿದ್ದ. ತಮ್ಮ ಕೆಲಸವೇ ಮಸ್ತಾಗಿರುವಾಗ ಬೇರೆಯವರಿಗೆ ಇವನ ಕೆಲಸ ಮಾಡಲು ಪುರುಸತ್ತು ಇರುತ್ತದೆಯೇ? ಮಾಡಿಕೊಡಲು ಇಷ್ಟವಾದರೂ ಇರುವುದೇ?



ಯಾರ ಹತ್ತಿರ ಮಾಡಿಸಲಿ' ಎಂದು ಆಲೋಚಿಸುತ್ತಿದ್ದನೇ ಹೊರತು, ತಾನು ಆ ಕೆಲಸ ಮಾಡಲು ಪ್ರಯತ್ನ ಪಡಲಿಲ್ಲ.

ಇದ್ದಕ್ಕಿದ್ದಂತೆಯೇ ಅವನಿಗೆ ಮಿಂಚಿನಂತೆ ಯೋಚನೆ ಹೊಳೆಯಿತು. ಕೂಡಲೇ ಅವನು ಗಬಗಬನೆ ಮನೆಯೊಳಕ್ಕೆ ಹೋಗಿ, ಅಟ್ಟದ ಮೇಲೆ ಹತ್ತಿ ಭೂತವಿದ್ದ ಪೆಟ್ಟಿಗೆಗೆ ಎದುರಾಗಿ ನಿಂತು, ಷೇರ್ ಷೀರ್ ಜಂಗ್ ಧ್ವನಿಯನ್ನು ಅನುಕರಿಸುತ್ತಾ "ಭೂತವೇ, ಹಿತ್ತಲಲ್ಲಿ ಒಂದು ಹಳ್ಳತೋಡು" ಎಂದು ಆಜ್ಞಾಪಿಸಿದ.

ಕೂಡಲೇ ಆರು ಅಂಗುಲ ಭೂತ ಹೊರಗೆ ಬಂದು ಆರು ಅಡಿ ಎತ್ತರ ಬೆಳೆದು, ರಹಿಮಾನನನ್ನು ನೋಡಿತು. "ಅರೆ, ಬದ್ಮಾಷ್, ನೀನೇ ನನ್ನನ್ನು ಕರೆದಿದ್ದು? ನನ್ನ ಯಜಮಾನನೆಂದು ಕೊಂಡಿದ್ದೆ" ಎಂದು ಕೋಪದಿಂದ ಹಲ್ಲನ್ನು ಕಟಕಟನೆ ಕಡಿಯಿತು. ಆದರೇನು? ಹೊರಗೆ ಬಂದ ಮೇಲೆ ಆಜ್ಞೆ ನೆರವೇರಿಸಲೇಬೇಕಷ್ಟೆ. ಆದುದರಿಂದ ಚನಿಕೆ ತೆಗೆದುಕೊಂಡು ಹಿತ್ತಲಿಗೆ ಹೋಯಿತು.

ಭೂತ ಹಲ್ಲುಕಡಿಯುತ್ತಾ ಕೋಪವನ್ನು ಸೂಚಿಸಲು ಮೊದಲು ರಹಿಯಾನನು ಭಯಗೊಂಡನಾದರೂ, ಕೆಲಸ ಸುಸೂತ್ರವಾಗಿ ಸಾಗುತ್ತಿದ್ದುದರಿಂದ ಸಂತೋಷಪಟ್ಟು, ತನ್ನ ಬುದ್ಧಿಗೆ ತಾನೇ ಮೆಚ್ಚಿಕೊಂಡ. ಪುಷ್ಕಳವಾಗಿ ಊಟ ಹೊಡೆದಿದ್ದನಾದುರಿಂದ ಅವನಿಗೆ ಅಲ್ಲೇ ನಿದ್ದೆ ಬರುವಂತೆ ಆಯಿತು. ಯಜಮಾನನ

ಯಜಮಾನ ಒಂದು ದಿನ ಹಿತ್ತಲಲ್ಲಿ ಯಾವುದೋ ಸಸಿ ನೆಡಬೇಕೆಂದು, ಒಂದು ಹಳ್ಳ ತೋಡುವಂತೆ ರಹಿಮಾನನಿಗೆ ಆಜ್ಞಾಪಿಸಿ ಎಲ್ಲಿಗೋ ಹೋದ. ಮಾಮೂಲಿನಂತೆ ರಹಿಮಾನ್ ಇತರರ ಮೇಲೆ ಆ ಕೆಲಸ ಹಾಕಲು ಪ್ರಯತ್ನಿಸಿದ. ಆದರೆ ಈ ಸಾರಿ ಅವರು ಇವನ ಮಾತನ್ನು ಗಣನೆಗೆತಾರದೆ "ನೀನೂ ಸಹ ನಮ್ಮಂತೆಯೇ ಸಂಬಳ ಪಡೆಯುವೆ. ನಿನ್ನ ಕೆಲಸ ನೀನೇ ಮಾಡಿಕೊ—ನಮಗೇನು ಹಿಡಿದಿದೆ ಕೀಟೆ, ಹೋಗ್" ಎಂದರು.

ಸೋಂಬೇರಿಗಳು ಎಷ್ಟು ಆಲೋಚನೆಯನ್ನಾದರೂ ಮಾಡಬಲ್ಲರೇ ಹೊರತು, ಕೆಲಸ ಮಾತ್ರ ಮಾಡಲಾರರು. ಸೋಮಾರಿಗಳಲ್ಲಿ ಅಗ್ರಗಣ್ಯನಾದ ರಹಿಮಾನ್ 'ಈ ಕೆಲಸ

ಮಂಚ ಅಲ್ಲಿ ಕಾಣಿಸಲು, ಅದರಮೇಲೆ ನಡು ಬಾಗಿಸಿದ. ಯಜಮಾನನ ಹಾಸಿಗೆಯಮೇಲೆ ಮಲಗಲು ಅವನಿಗೆಷ್ಟು ಸೊಕ್ಕು ಇರಬೇಕು? 'ಯಜಮಾನರು ಈಗ ನೋಡಲು ಬರುವರೇ? ಅವರು ಬರುವಷ್ಟರಲ್ಲಿ ಎಚ್ಚರವಾಗುವುದಿಲ್ಲವೇ?' ಎಂಬ ಆತ್ಮವಿಶ್ವಾಸದಿಂದ ಅವನು ಆ ರೀತಿ ಮಲಗಿಕೊಂಡ. ಮಲಗಿದಕೂಡಲೇ ನಿದ್ರೆ ಬಂತು. ಸೋಮಾರಿಗಳಿಗೆ ನಿದ್ದೆ ಹೆಚ್ಚು ಎಂದು ಹೇಳುತ್ತಾರೆ. ಅವನು ಗೊರಕೆ ಹೊಡೆಯಲು ಪ್ರಾರಂಭಿಸಿದ. ಎರಡು ಗಂಟೆ ಹೊತ್ತು ಅವನು ಈ ರೀತಿ ನಿದ್ದೆ ಮಾಡಲು, ಆಕಡೆ ಹೋಗುತ್ತಿದ್ದ ಅಡಿಗೆಯವನು, ಇದನ್ನು ಕಂಡು ಅವನ ಧೈರ್ಯಕ್ಕೆ ಮೂಗಿನ ಮೇಲೆ ಬೆರಳಿಟ್ಟುಕೊಂಡ. ಯಜಮಾನ ನೋಡಿದರೆ ಇವನ ಬಾಯಿಗೆ ಮಣ್ಣು ಬೀಳುವುದೆಂದು ಮರುಕಗೊಂಡು, ಆ ಅಡಿಗೆಯವನು ಕೈಯಲ್ಲಿದ್ದ ಬಿಸಿಬಿಸಿ ಸೌಟನ್ನು ರಹಿಮಾನನ ಸೊಂಟದಮೇಲಿಟ್ಟು ಬಿಸಿ ಕಾಣಿಸಿದ.

ರಹಿಮಾನ ಬೆಚ್ಚಿಬಿದ್ದೆದ್ದು, ಹಳ್ಳ ಎಷ್ಟರವರೆವಿಗೆ ಬಂದಿದೆಯೋ ನೋಡಲು ಹಿತ್ತಲಿಗೆ ಓಡಿದ. ಓಡಿಹೋಗಿ ನೋಡಿದರೆ ಏನಿದೆ? ಬ್ರಹ್ಮಾಂಡವಾದ ಹಳ್ಳವೊಂದು ಸಿದ್ಧವಾಗಿ, ಅದರಲ್ಲಿ ಇನ್ನೂ ಅಗೆಯುತ್ತಿರುವ ಭೂತ ಕಾಣಿಸಿತು. "ಒಂದಡಿ ಹಳ್ಳ ತೋಡು ಎಂದರೆ ಸಮುದ್ರದಷ್ಟು ಆಳವಾದ ಹಳ್ಳ ತೋಡಿರುವೆಯಲ್ಲಯ್ಯಾ ಮಹಾನುಭಾವ!




ರಾಣಾರವರ ಮನೆ ಆಸ್ತಿಭಾರಕ್ಕೆ ಸಂಚಕಾರ ಬರುವಂತಿದೆ. ಮನೆಯೇ ಹಳ್ಳದಲ್ಲಿ ಬೀಳುವಂತಿದೆ. ನಿಲ್ಲು ನಿಲ್ಲು. ಇನ್ನು ಅಗೆಯಬೇಡ" ಎಂದು ಅರಚಿದ.

ಭೂತ ಕುಪಿತನಾಗಿ "ಅಗೆಯುವುದನ್ನು ನಿಲ್ಲಿಸು ಎಂದು ಹೇಳಲು ನೀನಾರು? ಯಜಮಾನರು ಬಂದು ನಿಲ್ಲಿಸುವಂತೆ ಹೇಳುವವರೆವಿಗೂ ನೀನಲ್ಲ, ಬ್ರಹ್ಮರುದ್ರರು ಬಂದರೂ ನಿಲ್ಲಿಸಲಾರೆ" ಎಂದು ಗರ್ಜಿಸಿದ.

ಆ ಗರ್ಜನೆಯನ್ನು ಕೇಳಿ ಮನೆಯಲ್ಲಿದ್ದ ನೌಕರರೆಲ್ಲಾ ಹೊರಗೆ ಬಂದರು. ವಿಷಯವೇನೆಂದು ಕೇಳಿದರು. ಸಗರಪುತ್ರರು ಅಗೆದ ಮಹಾಕುಂಡದಂತೆ ಕಾಣಿಸುತ್ತಿದ್ದ ಆ ಹಳ್ಳವನ್ನು ಕಂಡು ಎದೆ ಎದೆ ಬಡಿದುಕೊಂಡರು.

"ಒಂದು ಕ್ಷಣ ಆಲಸ್ಯಮಾಡಿದರೂ ಆ ಭವನ ಆ ಹಳ್ಳದಲ್ಲಿ ಬೀಳುವುದು ಖಂಡಿತ. ಯಜಮಾನರನ್ನು ಕೂಡಲೇ ಕರೆದುಕೊಂಡು ಬಾ" ಎಂದು ರಹಿಮಾನನನ್ನು ಅಟ್ಟಿದರು.

ಆಗಲೇ ಮನೆಗೆ ಹಿಂತಿರುಗುತ್ತಿದ್ದ ರಾಣಾ, ಗಲ್ಲಗಲ್ಲ ಬಡಿದುಕೊಳ್ಳುತ್ತಾ ಓಡಿಬರುತ್ತಿದ್ದ ರಹಿಮಾನನನ್ನು ನೋಡಿ "ಏನದು ವಿಶೇಷ, ಏಕೆ ಹೀಗೆ ಮಂಕು ಬಡಿದವನಂತೆಯಿರುವೆ?" ಎಂದು ಕೇಳಲು, ಅವನು "ನಿಮ್ಮ ಭವನ ಕುಸಿದು ಬೀಳುತ್ತಿದೆ ಸ್ವಾಮಿ. ಬೇಗ ಬನ್ನಿ" ಎಂದು ಮತ್ತೆ ಮನೆಕಡೆ ಓಡಿದ. ರಾಣಾ ಸಹ ಸರಸರನೆ ನಡೆದು ಮನೆ ಹತ್ತಿರ ಬಂದು, ಪಾತಾಳದವರೆವಿಗೂ ಅಗೆದಿದ್ದ ಆ ಹಳ್ಳವನ್ನು ನೋಡಿ ಆಶ್ಚರ್ಯಪಟ್ಟ. ಇನ್ನೂ ಅಗೆದು ಗುಡ್ಡೆಯಾಗಿ ಹಾಕುತ್ತಿದ್ದ ಭೂತವನ್ನು ಹೊರಗೆ ಬರುವಂತೆ ಹೇಳಿ, "ಮನೆ ಕುಸಿದು ಬೀಳದಂತೆ ಹತ್ತು ಗಜ ದೂರಕ್ಕೆ ತಳ್ಳು" ಎಂದು ಆಜ್ಞಾಪಿಸಿದ.

ಭೂತ ಆ ಆಜ್ಞೆಯನ್ನು ನೆರವೇರಿಸಿ, ಎಡಕ್ಕೆ ಮುಖ ತಿರುಗಿಸಿಕೊಂಡು ನಿಂತಿದ್ದ ರಹಿಮಾನನನ್ನು ದುರದುರನೆ ನೋಡಿ ಪೆಟ್ಟಿಗೆಯಲ್ಲಿ ಪ್ರವೇಶಿಸಿ ಮುಚ್ಚಳ ಹಾಕಿಕೊಂಡಿತು. ನೌಕರರಿಂದ ರಾಣಾ ವಿಷಯವೆಲ್ಲವನ್ನೂ ತಿಳಿದುಕೊಂಡು, ರಹಿಮಾನನನ್ನು ಕರೆದು "ಇನ್ನೂ ಏನು ದಿಕ್ಕುನೋಡುತ್ತಿರುವೆ? ಚನಿಕೆ ತೆಗೆದುಕೊಂಡು ಈ ಹಳ್ಳಮುಚ್ಚು" ಎಂದು ಹೂಂಕರಿಸಿದ.

ರಹಿಮಾನ ಗಡಗಡ ನಡುಗುತ್ತಾ "ಸ್ವಾಮಿ, ಈ ಹಳ್ಳ ಮುಚ್ಚುವುದು ನನ್ನ ಕೈಯಿಂದ ಸಾಧ್ಯವೇ. ಎಷ್ಟು ವರ್ಷ ಹಿಡಿಯುವುದೋ ಏನೋ" ಎಂದು ಗೋಳಾಡಿದ.

"ಹಿಡಿಯಲಿ, ಸಣ್ಣ ಕೆಲಸಕ್ಕೆ ಸೋಮಾರಿತನ ತೋರಿದ್ದಕ್ಕೆ ನಿನಗಿದೇ ಶಿಕ್ಷೆ. ಸೋಂಬೇರಿಗೆ ಕೆಲಸ ಹೆಚ್ಚು ಅಂತ ಹೇಳ್ತಾರೆ ಹಿರಿಯರು. ತೆಗೆದುಕೋ ಚನಿಕೆ" ಎಂದ ರಾಣಾ.

ಮರುಮಾತನಾಡದೆ ರಹಿಮಾನ ಚನಿಕೆ ಕೈಗೆ ತೆಗೆದುಕೊಂಡು ದೊಡ್ಡ ಪರ್ವತದಂತೆ ಬಿದ್ದಿದ್ದ ಮಣ್ಣಿನ ರಾಶಿಯನ್ನು ತೆಗೆದು ಹಳ್ಳ ಮುಚ್ಚಲು ಪ್ರಾರಂಭಿಸಿದ. ಅವನಾರೀತಿ ಎಷ್ಟುವರ್ಷ ಕೆಲಸ ಮಾಡಲಿ, ಆ ಹಳ್ಳ ಮುಚ್ಚುವಂತೆ ಕಾಣ ಬರಲೊಲ್ಲದು.



## ನಗೆಹನಿ

ರಾಮು—ಕಿಟ್ಟು, ಈಗಿನ ಕಾಲದಲ್ಲಿ ಚಿರಂಜೀವಿಗಳು ಯಾರೋ ?

ಕಿಟ್ಟು—ಸಿನಿಮಾ ಆಕ್ಟರ್ಸ್ ಕಣೋ !

* * *

ಹಳ್ಳಿಗ—ಕ್ರಾಪ್ ಮಾಡೋಕೆ ಏನಾಗುತ್ತೇರಿ?

ಕ್ಷೌರಿಕ—ಎಂಟಾಣೆ ಆಗುತ್ತೆ !

ಹಳ್ಳಿಗ—ತಲೆ ಬೋಳಿಸಿದರೆ....?

ಕ್ಷೌರಿಕ—ನುಣ್ಣಗಾಗುತ್ತೆ.

* * *

ತಂದೆ-ಲೋ, ಚಂದಿ, ಪರೀಕ್ಷೆಯಲ್ಲಿ ಯಾಕೋ ಫೇಲು ?....ನಾಚಿಕೆಯಿಲ್ಲ ? ವಾಷಿಂಗ್‌ಟನ್ ನಿನ್ನ ವಯಸ್ಸಿನಲ್ಲಿ ಕ್ಲಾಸಿನಲ್ಲಿ ಫಸ್ಟ್ ಆಗಿದ್ದ; ಗೊತ್ತೇನು ?

ಚಂದಿ—ವಾಷಿಂಗ್‌ಟನ್ ನಿನ್ನ ವಯಸ್ಸಿನಲ್ಲಿ ಅಮೆರಿಕದ ಪ್ರೆಸಿಡೆಂಟ್ ಆಗಿದ್ದನಲ್ಲ! ನೀನು ?

* * *

ಯಜಮಾನ-ಲೋ, ನಿನ್ನನ್ನು ಕೆಲಸದಿಂದ ವಜಾಮಾಡಿದ್ದೇನೆ. ಮನೆಗೆ ಹೋಗು !

ಜವಾನ—ಅಯ್ಯೋ, ಅದ್ಯಾಕ ಬುದ್ಧೀ ? ನಾನೇನೂ ಮಾಡ್ದೆ ನನ್ ಪಾಟಿಗೆ 'ರಾಮಾ' ಎಂತ ಸುಮ್ಕೆ ಕುಂತಿದ್ನಿ !

ಯಜಮಾನ-ಅದೇ ಕಾರಣಕ್ಕಾಗಿ.

—ಎಸ್. ಜೆ. ಗುಪ್ತ.

* * *

ಸಿದ್ದ—(ಡಾಕ್ಟರಿಗೆ) ನನ್ನ ಕಣ್ಣು ಕೆಟ್ಟೋಗೈತೆ, ನೋಡಿ ಸಾಮಿ.

ಡಾಕ್ಟರು—ಏನಾಗಿದೆಯೋ ?

ಸಿದ್ದ—ಅಲ್ಲಿ ನೋಡ್ರಿ, ಅಲ್ಲಿ ಕುಂತ ಆಸಾಮಿ ನಿಮ್ಗೆ ಕಾಣಿಸ್ತವನೆ ಅಲ್ವಾ ?

ಡಾಕ್ಟರು—ಹೌದು.

ಸಿದ್ದ—ಆದರೆ ನನಗೆ ಕಾಣಿಸೋದಿಲ್ಲ.

—ಬಿ. ಭಾರದ್ವಾಜ.

## ಚುಟುಕ

ಸರಿಗೆ ಇರುವ ಪೇಟೆ
ಅದಕೆ ಇಲಿಯು ಕಾಟೆ
ಹೊಂಚು ಕಾದ
ಬೆಕ್ಕಿಗಂದು
ಆಯ್ತು ಹಬ್ಬದೂಟ.

—ಎಂ. ಆರ್. ಹನುಮಂತರಾವ್

ಹೂವು ತುಂಬಿದ ಬುಟ್ಟಿ,
ಸಂತೆಗೆ ತಂದಳು ಪುಟ್ಟಿ,
ಹೂವನು ಮಾರಿ
ಹಣವನೆ ಪಡೆದು,
ಕೊಂಡುಕೊಂಡಳು ರೊಟ್ಟಿ

—ಬಿ. ಸೇತುಮಾಧವಾಚಾರ್ಯ.

## ಭೂಗೋಳದ ಒಗಟುಗಳು

1. ಚೆಲುವಿನ ಹುಡುಗಿ
ಸಾಗರದಲ್ಲಡಗಿ
ನೋಡಲು ಮಾವಿನಕಾಯಿ
ಭಾರತಿ ಅವಳತಾಯಿ.

2. ಕರಡಿ ಎಂದು ಕರೆಯಲ್ಪಟ್ಟು
ಕೆಂಪುಬಣ್ಣ ಇಷ್ಟಪಟ್ಟು
ಸುತ್ತಿಗೆಯಿಂದ ಬಡೀತೀನಿ
ಕುಡುಗೋಲಿಂದ ಕೊಯ್ಯುತೀನಿ.

—ಡಿ. ಎಸ್. ರಾಜೇಂದ್ರಕುಮಾರ್.

ಉತ್ತರ
1. ಶ್ರೀಲಂಕಾ. 2. ಸೋವಿಯೆಟ್ ರಷ್ಯ.




## ಸಸಿಯನ್ನು ಬೆಳೆಸುವ ಗಮ್ಮತ್ತು

ಒಂದು ಸಣ್ಣ ಮಾವಿನ ಸಸಿಯನ್ನು ನೆಲದಲ್ಲಿ ಹೂತಿಟ್ಟು, ಐದು ನಿಮಿಷಗಳಲ್ಲಿ ಅದನ್ನ ಕಾಯಿ ಬಿಡುವ ಮಾವಿನ ಟೊಂಗೆಯನ್ನಾಗಿ ಮಾಡುವ ಗಾರಡಿಯನ್ನು ನೋಡಿ ಸಭಿಕರೆಲ್ಲಾ ಬೆರಗಾಗುವರು. ನಮ್ಮ ದೇಶದ ಗಾರಡಿಯವರು ಈ ಗಮ್ಮತ್ತನ್ನು ಬಹಳ ಚಾಕಚಕ್ಯತೆಯಿಂದ ತೋರಿಸುತ್ತಾರೆ.

ಪಶ್ಚಾತ್ಯದೇಶದ ಜಾದೂಗಾರರಿಗೆ ಇದು ತುಂಬಾ ಆಶ್ಚರ್ಯವಾಗಿ ತೋರುವುದು.

ಒಂದು ತಗಡಿನಿಂದ ಮಾಡಿದ ಸುಮಾರು ಒಂದು ಅಡಿ ಎತ್ತರ, ಅರ್ಧ ಅಡಿ ಅಗಲವಾಗಿರುವ ಒಂದು ದುಂಡನೆಯ ಡಬ್ಬ ತೆಗೆದುಕೋ. ಅದಕ್ಕೆ ಮುಚ್ಚಳವಿರಕೂಡದು. ಅಗಲವಾದ ಬಾಯಿಯಿರುವ ಥರ್ಮಾಸ್ ಫ್ಲಾಸ್ಕಿಗೆ ಹಾಕುವ ಒಂದು ಬಿರಡೆ ತಂದು ಅದರ ಮಧ್ಯೆ ಸಣ್ಣನೆಯ ತೂತು ಕೊರೆ. ಆ ತೂತಿನೊಳಗೇ ನೀನು ತೋರಿಸಲಿರುವ ಸಸಿಯ ಕಾಂಡವನ್ನು ತೂರಿಸು. ಬಿರಡೆಯೊಂದಿಗೆ ಸಸಿಯನ್ನು ಡಬ್ಬದಲ್ಲಿಟ್ಟು, ಬಾಯಿಗೆ ಒಂದು ಕೈಚೌಕವನ್ನ ಹಾಕಿ ಕಟ್ಟು.

ಈ ಟ್ರಿಕ್ ನೀನು ಪ್ರದರ್ಶಿಸಬೇಕೆಂಬ ಜಾಗದಲ್ಲಿ, ಡಬ್ಬ ಸರಿಯಾಗಿ ಹಿಡಿಸುವಷ್ಟು ನೆಲವನ್ನು ಅಗೆ. ಆ ಹಳ್ಳ ಡಬ್ಬಕ್ಕಿಂತಲೂ ತುಸು ಆಳವಾಗಿರಬೇಕಾದುದು ಅತ್ಯವಶ್ಯಕ.



ಈ ಹಳ್ಳದಲ್ಲಿ ನೀನು ಸಿದ್ಧಪಡಿಸಿಕೊಂಡು ಬಂದಿರುವ ಡಬ್ಬ ಇಟ್ಟು, ಡಬ್ಬ ಮೇಲೆ ಖಾಲಿಯಾಗಿರುವ ಸ್ಥಳವನ್ನು ಮರಳಿನಿಂದ ತುಂಬು, ಆಮೇಲೆ ಮಾಮೂಲು ಮಣ್ಣಿನಿಂದ ಸಂಪೂರ್ಣವಾಗಿ ಹಳ್ಳವನ್ನು ಮುಚ್ಚಿ ನೆಲದ ಮಟ್ಟಕ್ಕೆ ಬರುವಂತೆ ಮಾಡು. ಇನ್ನ

ಮೊದಲನೇ ಚಿತ್ರದಲ್ಲಿ ತೋರಿಸಲಾಗಿದೆ. ಪ್ರದರ್ಶನ ಮಾಡುವ ಮುನ್ನ ಪ್ರೇಕ್ಷಕರ ಎದುರಾಗಿನಿಂತು, ನೀನು ಡಬ್ಬ ಮುಚ್ಚಿಟ್ಟಿರುವ ಜಾಗವನ್ನು ತೋರಿಸುತ್ತಾ, "ನೋಡಿ, ನೀವು ನೋಡುತ್ತಿರುವಂತೆಯೇ ಒಂದು ಮರವನ್ನ ಬೆಳೆಸುತ್ತೇನೆ" ಎಂದು ಅಲ್ಲಿನೀರು ಹಾಕು. ನೀರು ಮಣ್ಣಿನಿಂದ ಒಳಗೆ ಹೋಗಿ ಡಬ್ಬಕ್ಕೆ ಕಟ್ಟಿರುವ ಕರವಸ್ತ್ರದ ಮೂಲಕ ಒಳಕ್ಕೆ



ಹೋಗುವುದು. ಆ ನೀರಿನಮೇಲೆ ಬಿರಡೆಯಿಂದಿರುವ ಸಸಿ ಮೇಲಕ್ಕೆ ತೇಲುವುದು.

ತರುವಾಯ ಮರಳನ್ನು ತೆಗೆ. ಸ್ವಲ್ಪಹೊತ್ತಿಗೆಲ್ಲಾ ಮರಳು ಮುಗಿದು ಡಬ್ಬಕ್ಕೆ ಕಟ್ಟಿರುವ ಕೈಚೌಕಕ್ಕೆ ನಿನ್ನ ಕೈಸೋಕುವುದು. ಅದನ್ನು ಜಾಗರೂಕತೆಯಿಂದ ಬಿಚ್ಚಿ ಆ ಹಳ್ಳದಲ್ಲೇ ಯಾರಿಗೂ ಕಾಣದಂತೆ ಡಬ್ಬಾ ಪಕ್ಕದಲ್ಲಿ ತರುಕು. ಈಗ ನೀರು ಕೊಂಚಕೊಂಚವಾಗಿ ಹಾಕುತ್ತಾ ಹೋಗು.

ನೀರು ಹಾಕಿದಷ್ಟೂ ಬಿರಡೆ ಮೇಲಕ್ಕೆ ತೇಲುತ್ತಿರುತ್ತದೆ. ಬಿರಡೆಯೊಂದಿಗೆ ಆ ಸಸಿ ಸಹ ಮೇಲಕ್ಕೆ ಬರುವುದು.. ನೋಟಕರಿಗೆ ಆ ಸಸಿ ಸ್ವಲ್ಪ ಸ್ವಲ್ಪವಾಗಿ ಆಗಲೇ ಬೆಳೆದು, ಮೇಲಕ್ಕೆ ಬರುತ್ತಿರುವಂತೆ ಕಾಣಿಸುವುದು. ಎರಡನೇ ಚಿತ್ರ ನೋಡಿದರೆ ಬಹಳ ಚೆನ್ನಾಗಿ ಇದು ಕಂಡುಬರುತ್ತದೆ.

---

**ಪಾಠಕರು ಈ ಗಾರುಡಿಯನ್ನು ಕುರಿತು ಇನ್ನೂ ವಿವರಗಳನ್ನು ತಿಳಿದುಕೊಳ್ಳಬೇಕೆಂದರೆ, ಅವರು 'ಚಂದಮಾಮದ' ಹೆಸರು ಸೂಚಿಸಿ, ಪ್ರೊಫೆಸರ್ ಸರ್ಕಾರ್‌ರವರಿಗೆ ನೇರವಾಗಿ ಬರೆಯಬಹುದು. ಪತ್ರ ಇಂಗ್ಲೀಷಿನಲ್ಲಿರಬೇಕು. ಅವರ ಪತ್ತೆ:**

**ಪ್ರೊಫೆಸರ್ ಪಿ. ಸಿ. ಸರ್ಕಾರ್, ಮೆಜಿಷಿಯನ್**
12/3/A, ಜಮೀರ್ ಲೇನ್, ಬಾಲಿಗಂಜ್
ಕಲಕತ್ತಾ-19

ಚಂದಮಾಮ ಓದುಗರಿಗೆ ಶುಭಸಮಾಚಾರ

ನಮ್ಮ ಶ್ರೀ ಸರ್ಕಾರರು ದೂರಪ್ರಾಚ್ಯ ದೇಶಗಳಲ್ಲಿ ಈಗ ಸಂಚರಿಸುತ್ತಿದ್ದಾರೆ. ಪ್ರತಿಯೊಂದು ಸ್ಥಳದಲ್ಲೂ ಪ್ರತಿ ಪ್ರದರ್ಶನವೂ ಅತ್ಯಂತ ಯಶಸ್ವಿಯಾಗಿ ನಡೆಯುತ್ತಿದೆ ಸರ್ಕಾರರು ಹೀಗೆ ಮಲಯ, ಜಪಾನು, ಆಸ್ಟ್ರೇಲಿಯಾ ದೇಶಗಳಲ್ಲೂ ಸಂಚರಿಸುತ್ತಾರೆ. ಆದರೆ ಎಲ್ಲಿ 'ಸರ್ಕಾರರೋ' ಅಲ್ಲಿ 'ಚಂದಮಾಮ', ಆದುದರಿಂದ ಅವರು ಎಲ್ಲಿದ್ದರೂ ಸರಿ ನಮ್ಮ ಓದುಗರು ಇಂದ್ರಜಾಲ ಚಮತ್ಕಾರಗಳನ್ನು ಎಂದಿನಂತೆ ಪಡೆಯುತ್ತಲೇ ಇರುತ್ತಾರೆ.

# ಮುಖಚಿತ್ರ

ಸಾಲ್ವನು ಶಿಶುಪಾಲನ ಆಪ್ತಮಿತ್ರನು. ಶ್ರೀಕೃಷ್ಣನು ಶಿಶುಪಾಲನ ಪತ್ನಿಯಾಗಬೇಕಿದ್ದ ರುಕ್ಮಿಣಿಯನ್ನು ವರಿಸಿದಂದಿನಿಂದಲೇ ಆತನಿಗೆ ಕೃಷ್ಣನ ಮೇಲೆ ಕೋಪ. 'ಕೃಷ್ಣನನ್ನು ಮಾತ್ರವಲ್ಲ, ಯಾದವಕುಲವನ್ನೇ ನಿರ್ಮೂಲಮಾಡುತ್ತೇನೆ' ಎಂದು ರಾಜರ ಸಮ್ಮುಖದಲ್ಲಿ ಪ್ರತಿಜ್ಞೆಮಾಡಿದನು ಸಾಲ್ವ.

ಪ್ರತಿಜ್ಞೆ ನೆರವೇರಿಸಲು ಈಶ್ವರನನ್ನು ಕುರಿತು ಘೋರ ತಪಸ್ಸು ಮಾಡಿದನು. ಈಶ್ವರನು ಮೆಚ್ಚಿ ಪ್ರತ್ಯಕ್ಷನಾದನು. ಸುರಾಸುರ ನರ ಗಂಧರ್ವ ಇತ್ಯಾದಿಗಳಿಗೂ ಅಭೇದ್ಯವಾದ ಕಾಮಗಮನವುಳ್ಳ ಭಯಂಕರ ವಿಮಾನವನ್ನು ದಯಪಾಲಿಸಬೇಕೆಂದು ಕೇಳಿಕೊಳ್ಳಲು ಶಿವನು ಮಯನನ್ನು ಅದೇರೀತಿ ನಿರ್ಮಿಸಿಕೊಡಲು ಆಜ್ಞಾಪಿಸಿದನು. ಮಯನು 'ಸೌಭವಿಮಾನ'ವನ್ನು ನಿರ್ಮಿಸಿ ಸಾಲ್ವನಿಗೆ ಕೊಟ್ಟನು.

ಸೌಭವಿಮಾನವನ್ನು ಪಡೆದಾಗಿನಿಂದ ಸಾಲ್ವನ ದುಷ್ಟತನಕ್ಕೂ ಪರಾಕ್ರಮಕ್ಕೂ ಮೇರೆಯೇ ಇಲ್ಲ. ಅದನ್ನೇರಿಕೊಂಡು ಮಾಯಾವಿಧಾನಗಳಲ್ಲಿ ದ್ವಾರಕಿಯನ್ನು ಧ್ವಂಸಮಾಡತೊಡಗಿದನು. ಕಲ್ಲು, ಮರ, ಸಿಡಿಲು, ಬೆಂಕಿ, ವಿಷಜಂತು ಮುಂತಾದುವುಗಳ ಮಳೆಯನ್ನೇ ಕರೆದನು. ಸುಳಿಗಾಳಿ, ಬಿರುಗಾಳಿ ಮಳೆಗಳಿಂದ ಅನಾಹುತಗಳನ್ನೆಸಗಿ ವಿಧವಿಧ ತೊಂದರೆ ಕೊಡಲಾರಂಭಿಸಿದನು.

ಆಗ ಪ್ರದ್ಯುಮ್ನನು ಸೇನೆಗಳೊಡನೆ ಸಾಲ್ವನಕೂಡೆ ಯುದ್ಧ ನಡೆಸಿದನು. ಆದರೆ ಆ ಮಾಯಾವಿಮಾನವು ನಾನಾರೂಪಗಳನ್ನು ಹೊಂದಿ ಕ್ಷಣಕ್ಕೊಂದು ಕಡೆಗೆ ಸಾಗುತ್ತಾ, ಅದೃಶ್ಯವಾಗುತ್ತಾ, ಯುದ್ಧರಂಗವನ್ನೆಲ್ಲಾ ಮಾಯಾಜಾಲದಲ್ಲಿ ಮುಳುಗಿಸಿ ಅಜೇಯವಾಗಿತ್ತು. ಶೂರನಾದ ಪ್ರದ್ಯುಮ್ನನು ೨೨ ದಿನ ಘೋರ ಯುದ್ಧ ನಡೆಸಿ ಮೂರ್ಛೆಗೊಂಡನು. ಸಾಲ್ವನ ಅಹಂಕಾರ ಮೇರೆ ತಪ್ಪಿತು.

ಇಷ್ಟರಲ್ಲಿ ಯಾಗಕ್ಕೆ ಹೋಗಿದ್ದ ಕೃಷ್ಣನು ಅಪಶಕುನಗಳನ್ನು ಕಂಡು ಕೂಡಲೇ ದ್ವಾರಕೆಗೆ ಹಿಂತಿರುಗುತ್ತಾ ಸಾಲ್ವನ ದುರಾಕ್ರಮಣವನ್ನು ಕಂಡನು. ಸೌಭವಿಮಾನವನ್ನು ಗದಾಪ್ರಹಾರದಿಂದ ಚುಕ್ಕುಚೂರಾಗಿ ಮಾಡಲು ಸಾಲ್ವನು ಅಸಹಾಯನಾಗಿ ಭೂಮಿಗಿಳಿದು ಕೃಷ್ಣನನ್ನು ನಿಂದಿಸಿದನು. ಕೃಷ್ಣನಮೇಲೆ ಸರ್ವ ಶಕ್ತಿಯೊಡನೆ ನುಗ್ಗಲು ಕೃಷ್ಣನು ತನ್ನ ಅಮೋಘವಾದ ಚಕ್ರಾಯುಧದಿಂದ ಸಾಲ್ವನ ಶಿರವನ್ನು ಕತ್ತರಿಸಿ ಕೊಂದನು.

# ಬಣ್ಣದ ಚಿತ್ರ ಕಥೆ—ಚಿತ್ರ - 2

ಕೊಂಬೆ ಕತ್ತರಿಸಲು ಚಾಂಗ್ ಕತ್ತಿಯಿಂದ ಒಂದೇಟು ಹಾಕಿದ. ಏಟು ಬಿದ್ದ ಕೂಡಲೇ ಮರದಿಂದ ಒಂದುವಿಧ ನರಳುವ ಶಬ್ದ ಕೇಳಿಬಂದಿತು. ಚಾಂಗ್ ಆಶ್ಚರ್ಯಹೊಂದಿ ಆ ಶಬ್ದ ಎಲ್ಲಿಂದ ಬಂದಿತೆಂದು ಸುತ್ತಲೂ ಪರಿಶೀಲಿಸಿ ನೋಡಿದ. ಆದರೆ ಯಾವುದೂ ಕಾಣಿಸಲಿಲ್ಲ. ಏನೋ ತನ್ನ ಭ್ರಮೆಯೇ ಇರಬಹುದೆಂದು ನೆನೆಸಿ ಆ ಕತ್ತರಿಸಿದ ಕೊಂಬೆಯನ್ನು ತೆಗೆದುಕೊಂಡು ಮನೆ ಸೇರಿಕೊಂಡ.

ಆ ದಿನವೇ ಆ ಕೊಂಬೆಯಿಂದ ವಿಗ್ರಹ ಕೆತ್ತಲು ಪ್ರಾರಂಭಿಸಿದ. ತನ್ನ ಕೌಶಲ್ಯವನ್ನೆಲ್ಲಾ ಉಪಯೋಗಿಸಿ ಒಂದು ವಾರದೊಳಗೆ ಒಬ್ಬ ವೃದ್ಧನ ಬೊಂಬೆ ತಯಾರಿಸಿದ. ಆದರೆ ಬೊಂಬೆ ಪೂರ್ತಿಯಾದಮೇಲೆ ಅದರ ಅಂದವನ್ನು ನೋಡಿ ಚಾಂಗಿಗೆ ಮನಸ್ಸಿನಲ್ಲಿ ಏನೇನೋ ಭಾವನೆಗಳುಂಟಾದುವು. ತಾನು ಇಷ್ಟು ವರ್ಷಗಳು ಕಷ್ಟಪಟ್ಟು ಮಾಡಿದ ಬೊಂಬೆಗಳೆಲ್ಲಾ ಇದರ ಮುಂದೆ ಏನೂ ಕೆಲಸಕ್ಕೆ ಬಾರದವೆಂದೆನಿಸಿತು—ಇಷ್ಟು ಕಷ್ಟಪಟ್ಟು ತಯಾರಿಸಿದ ಈ ವೃದ್ಧನ ಬೊಂಬೆಯನ್ನು ಯಾವುದೋ ಒಂದು ಕೊಡೆಗೆ ಹಿಡಿಯಾಗಿ ಸಿಕ್ಕಿಸಿದರೆ ತನ್ನತಾಯಿ ಕ್ಷಣದಲ್ಲಿ ಅದನ್ನು ಮಾರಿಬಿಡುವಳು. ಏನು ಮಾಡುವುದು?

ಚಾಂಗ್ ತೀವ್ರಾಲೋಚನೆಗೊಳಗಾದ. ಮರುದಿನವೇ ಈ ಹಿಡಿಯನ್ನೂ ಒಂದು ಕೊಡೆಗೆ ತಗುಲಿಸಿ ತಾಯಿಗೆ ಕೊಟ್ಟ. ಆದರೆ ಕೊಡುವ ಮುಂದೆ ಒಂದು ಮಾತು ಕೋರಿಕೊಂಡ: "ಈ ಹಿಡಿ ಹಿಡಿಯಲು ಸಾಮಾನ್ಯರಿಗೆ ಅರ್ಹತೆಯಿಲ್ಲ. ಈ ಹಿಡಿಯುಳ್ಳ ಕೊಡೆ ರಾಜ ಮಹಾರಾಜರ ಕೈಯಲ್ಲಿ ಶೋಭಿಸಬೇಕಾದುದು. ಆದುದರಿಂದ ಅಂತಹ ಘನವ್ಯಕ್ತಿಗೆ ಇದನ್ನು ಮಾರಬೇಕೇ ಹೊರತು ಇತರರಿಗೆ ಕೂಡದು" ಎಂದು ಹೇಳಿದ.

ಆ ನೂತನ ಕೊಡೆಯನ್ನು ಅಂಗಡಿಯಲ್ಲಿ ಇಟ್ಟಾಗಿನಿಂದ ಅಲ್ಲಿಗೆ ಬಂದವರೆಲ್ಲಾ ಅದೇ ಕೊಡೆ ತಮಗೆ ಬೇಕೆನ್ನುವರು. ಆದರೆ ಅವರು ಕೊಡಲು ಸಾಧ್ಯವಲ್ಲದ ಬೆಲೆ ಹೇಳುವಳು ಚಾಂಗ್ ತಾಯಿ. ಬೆಲೆ ಕೇಳಿದೊಡನೆಯೇ "ಅಬ್ಬಾ, ಅಷ್ಟು ಬೆಲೆಯೇ? ಅಂತಹ ಕೊಡೆಯನ್ನು ನಾವು ಕೊಂಡಂತೆಯೇ ಸರಿ!....ಆಗದ ಕೆಲಸ". ಎಂದು ತಮ್ಮೊಳಗೇ ಅಂದುಕೊಂಡು ಅದನ್ನು ಬಿಟ್ಟು ಬೇರೊಂದು ಕೊಡೆ ಕೊಂಡು ಕೊಂಡು ಹೋಗುವರು. ಹೀಗೇ ನಡೆಯುತ್ತಿತ್ತು. ಈ ದೆಸೆಯಿಂದ ಆ ಮುದುಕನ ಹಿಡಿಯುಳ್ಳ ಕೊಡೆಯು ಬಹಳದಿನ ಮಾರಲ್ಪಡದೆ ಅಂಗಡಿಯಲ್ಲಿ ಹಾಗೇ ಉಳಿದುಹೋಯಿತು.

# ಮರುಳ ಶಿಷ್ಯ

ಒಂದು ಊರು. ಅಲ್ಲಿ ಒಬ್ಬ ಗುರು. ಅವನಿಗೊಬ್ಬ ಮರುಳ ಶಿಷ್ಯನಿದ್ದ. ಒಂದು ದಿನ ಗುರು ಶಿಷ್ಯನನ್ನು ಕುರಿತು "ಎಲಾ ಶಿಷ್ಯಾ, ಪೂಜೆಗಾಗಿ ಅಂಗಡಿಗೆ ಹೋಗಿ ಒಂದು ಆಣೆಯ ಬಾಳೆಯ ಹಣ್ಣು ತೆಗೆದುಕೊಂಡು ಬಾ" ಎಂದು ಹೇಳಿದ. ಶಿಷ್ಯನು ಗುರುವಿನ ಆಜ್ಞೆಯಂತೆ ಹಣ್ಣನ್ನು ತರಲು ಅಂಗಡಿಗೆ ಹೊರಟ.

ಒಂದುಕಡೆ ಒಳ್ಳೆಯ ಹಣ್ಣನ್ನು ನೋಡಿ "ಬಾಳೆಯ ಹಣ್ಣುಗಳು ಹೇಗೆ?" ಎಂದು ಕೇಳಿದ. "ಮೂರುಬಿಲ್ಲಿಗೆ ಒಂದು" ಎಂದ ಅಂಗಡಿಯವ.

ಧಾರಣೆಯು ಹೆಚ್ಚಾಯಿತೆಂದು ಹತ್ತು ಹೆಜ್ಜೆ ಮುಂದೆ ನಡೆಯಲು ಮತ್ತೊಂದು ಅಂಗಡಿ ಸಿಕ್ಕಿತು. ಅಲ್ಲಿ ಕೇಳಲು ಒಂದು ಆಣೆಗೆ ಎರಡು ಎಂದು ಹೇಳಿದ. ಅದೂ ಸರಿಯೆನಿಸದೆ ಮುಂದಿನ ಅಂಗಡಿಯಲ್ಲಿ ಕೇಳಿದ. ಅಲ್ಲಿ ಅಂಗಡಿಯವ "ಒಂದು ಆಣೆಗೆ ಎರಡು; ನಿನಗಾಗಿ ಒಂದನ್ನು ಹೆಚ್ಚು ಕೊಡುತ್ತೇನೆ" ಎಂದು ಹೇಳಲು ಶಿಷ್ಯನು ಆನಂದದಿಂದ ಒಂದು ಆಣೆ ಕೊಟ್ಟು ಮೂರು ಹಣ್ಣು ಕೊಂಡು ಆಶ್ರಮದಕಡೆಗೆ ತಿರುಗಿದ.

ಬರುವಾಗ ದಾರಿಯಲ್ಲಿ ಅವನಿಗೆ ಬಾಯಲ್ಲಿ ನೀರೂರಿತು. ಹಸಿವು ಬೇರೆ, ಹಾಗೆ ಒಂದು ಯೋಚನೆ ಹೊಳೆಯಿತು. ಮೂರು ಹಣ್ಣುಗಳನ್ನು ದೇವರಿಗಿಟ್ಟು ಪೂಜಿಸುವದಿಲ್ಲ; ಮತ್ತು ಅಂಗಡಿಯವನು ಒಂದು ಹಣ್ಣನ್ನ ನನಗಾಗಿ ಕೊಟ್ಟಿರುವನು ಎಂದು ಯೋಚಿಸಿ ಒಂದನ್ನು ತಿಂದನು.

ಅದರ ಸವಿಯನ್ನು ಕಂಡು ಮತ್ತೆ ಬಾಯಲ್ಲಿ ನೀರೂರಿತು. ಸ್ವಲ್ಪದೂರ ಹೋಗುವಷ್ಟರಲ್ಲಿ ಮತ್ತೊಂದು ಯೋಚನೆ ಹೊಳೆಯಿತು. 'ಉಳಿದ ಎರಡು ಹಣ್ಣುಗಳಲ್ಲಿ ಗುರುವು ಪೂಜೆಮಾಡಿ ಒಂದನ್ನು ಪ್ರಸಾದವೆಂದು ನನಗೆ ಕೊಟ್ಟೇ ಕೊಡುತ್ತಾರೆ. ಆದ್ದರಿಂದ ಈಗಲೇ ತಿಂದರೇನಾಗುವುದು?'—ಎಂದು ಎರಡನೆಯ ಹಣ್ಣನ್ನು ಮುಗಿಸಿದ. ಉಳಿದ ಒಂದನ್ನು ಗುರುವಿಗೆ ತಂದು ಕೊಟ್ಟ.

ಇದನ್ನು ನೋಡಿ ಗುರುವು "ಎಲಾ, ಪೆದ್ದಾ! ಒಂದು ಆಣೆಗೆ ಒಂದೇ ಹಣ್ಣು ತಂದೆಯಾ" ಎಂದು ಗುಡುಗಿದ. ಇದಕ್ಕೆ ಶಿಷ್ಯನು ಹೆದರುತ್ತ ನಡೆದ ಸಂಗತಿ ತಿಳಿಸಿದ. ಇದಕ್ಕೆ ಗುರು ಕೋಪದಿಂದ "ಎಲಾ ಮೂರ್ಖ! ನನ್ನನ್ನು ಕೇಳದೆ ಹೇಗೆ ತಿಂದೆ?" ಎನ್ನಲು, ಅದಕ್ಕೆ ಆ ಕಿಡಿಗೇಡಿ ಶಿಷ್ಯನು ಉಳಿದ ಒಂದು ಹಣ್ಣನ್ನು ಕೈಯಲ್ಲಿ ಹಿಡಿದು ಸಿಪ್ಪೆ ಸುಲಿದು ಬಾಯಲ್ಲಿ ಹಾಕಿಕೊಂಡು "ಹೀಗೆ ತಿಂದೆ ಸ್ವಾಮಿ" ಎಂದು ಗುಳುಂ ಸ್ವಾಹಾ ಮಾಡಿದ.

ವೆಂಕಟ್ರಮಣ ಶಿ. ಹೆಗಡೆ, ಸೋಲಾಪುರ.

## ಬಗ್ಗಿದವಗೆ ಗುದ್ದು

ಟಿ. ಪಿ. ಶ್ರೀಧರ.

ಒಮ್ಮೆ ಕಿಟ್ಟ ಪುಟ್ಟರೊಳಗೆ ಭಾರಿ ಜಗಳವಾಯಿತು ।
ಜುಟ್ಟುಜುಟ್ಟು ಹಿಡಿದು ಏಟು ಗುದ್ದು ಕೂಡ ಬಿದ್ದಿತು ॥
ರಾಜಿಮಾಡಲೆಂದು ರಾಮು ಮೆಲ್ಲಮೆಲ್ಲ ಬಂದನು ।
ತಿಮ್ಮನವನ ಕಾಲು ಹಿಡಿದು ದಬರನೆ ಎಳೆದನು ॥
ಅಷ್ಟರಲ್ಲಿ ತಿಮ್ಮ ತಲೆಯ ಟೋಪಿ ದೂರ ಹಾರಿತು ।
ಟೋಪಿ ತೆಗೆವ ಸರಳೆ ಕೆಳಗೆ ಕಾಲುಜಾರಿ ಬಿದ್ದಳು ॥
ಅಮ್ಮ ಇದನು ದೂರದಿಂದ ಕದ್ದು ನೋಡುತಿದ್ದಳು ।
ಅಪ್ಪಬರಲು ಜಗಳ ಕೇಳಿ ಬೆತ್ತ ಹಿಡಿದು ಬಂದರು ॥
ಒಡನೆ ಹುಡುಗರೆದ್ದು ಬೇಗಬೇಗ ಓಡಿಹೋದರು ।
ನೋವಿನಿಂದ ಕೂಗುತಿರುವ ಸರಳೆ ಉಳಿದಳೊಬ್ಬಳೆ ॥
ಹುಡುಗರೊಡನೆ ಆಡಬೇಡವೆಂದುದನ್ನು ಕೇಳದೆ ।
ಆಡಿದುದಕೆ ಬೆತ್ತದಿಂದ ರಪರಪನೆ ಎಳೆದರು ॥

---

## ಬುದ್ಧಿವಂತಿಕೆ!

ಕೆ. ಟಿ. ಲಕ್ಷ್ಮೀನಾರಾಯಣ, ಶೃಂಗೇರಿ.

ರಾಮೇಗೌಡ ಒಂಟೆತ್ತಿನ ಗಾಡಿ ಇಟ್ಟಿದ್ದ. ಒಂದ ದಿನ ಅವನು ಪಟ್ಟಣಕ್ಕೆ ಗಾಡಿ ಹೊಡೆದುಕೊಂಡು ಹೊರಟ.

ಕಟ್ಟೆಯಲ್ಲಿ ಸುಂಕದ ಅಧಿಕಾರಿ, 'ಎಂಟಾಣೆ ಟೋಲ್ (ಸುಂಕ) ಕೊಡು' ಎಂದು ಕೇಳಿದ. ರಾಮೇಗೌಡ, "ದಮ್ಮಯ್ಯ, ಇದೊಂದ್ಸಾರಿ ಬುಟ್ಬುಡು" ಎಂದ. ಅವ ಕೇಳಲಿಲ್ಲ, ಹೇಳಿದ: "ಬೋರ್ಡ್ ನೋಡು—ಗಾಡಿ ಹೊಡೆಯುವವರು ಗಾಡಿಗೆ ಎಂಟಾಣೆ ಟೋಲ್ ಕೊಡಬೇಕು?—ಎಂದಿದೆ ನೋಡಿದೆಯಾ!"

ರಾಮೇಗೌಡ ಗಾಡಿ ಹಿಂದಿರುಗಿಸಿದ. ಏನು - ಒಂದು ಫರ್ಲಾಂಗ್ ಹಿಂದೆ ಬಂದಿರ ಬಹುದು—ಅಷ್ಟರಲ್ಲಿ ಒಂದು 'ಪ್ಲಾನ್' ಹೊಳೆಯಿತು. ತಕ್ಷಣ ಎತ್ತನ್ನ ಬಿಚ್ಚಿ ಗಾಡಿ ಒಳಕ್ಕೆ ಹಾಕಿದ, ಬಾರುಕೋಲನ್ನು ಅವನಬಾಯಿಗೆ ಇಟ್ಟ; ತಾನ ಎತ್ತಿನಂತೆ ಗಾಡಿಯನ್ನು ಎಳೆದುಕೊಂಡ ಹೊರಟ.

ಪೇಟೆಯಲ್ಲಿ ಎಲ್ಲರೂ ನಗುವವರೇ. ಸುಂಕದ ಅಧಿಕಾರಿಯೂ ನಗಲಾರಂಭಿಸಿದ. ರಾಮೇಗೌಡನನ್ನ ಕೇಳಿದ: "ಎಂಟಾಣೆಕೊಡು."

ರಾಮೇಗೌಡ ಹೇಳಿದ: ಗಾಡಿ ಹೊಡಿಯುವವನನ್ನು ಕೇಳಿರಿ!!

ಸುಂಕದವ ಹೊಟ್ಟೆ ತುಂಬಾ ನಕ್ಕು ಅವನನ್ನು ಹಾಗೇಬಿಟ್ಟ. ಹೇಗಿದೆ, ರಾಮೇಗೌಡನ ಬುದ್ಧಿವಂತಿಕೆ?




ವಿಜಯಾ ರವರ...

# ಮದುವೆ ಮಾಡಿ ನೋಡು

ನಿರ್ಮಾಪಕರು

## ನಾಗಿರೆಡ್ಡಿ-ಚಕ್ರಪಾಣಿ

ಡೈರೆಕ್ಷನ್

## ಪ್ರಸಾದ್

Controlling Editor : SRI CHAKRAPANI.
Printed and Published by B. NAGI REDDI at the B. N. K. Press Ltd., Madras




ಬಣ್ಣದ ಚಿತ್ರ ಕಥೆ—ಚಿತ್ರ - 2